# brown book

THE BOOK WAS DRENCHED

TEXT LITE WITHIN THE BOOK ONLY

ಪ್ರಭಾಕರ ಕಿರಣಮಾಲಾ.

ಶ್ರೀ ಗಣೇಶಾಯ ನಮಃ

ಶ್ರೀ ಲಕ್ಷ್ಮೀನಾರಾಯಣಾಭ್ಯಾಂ ನಮಃ

# ಶೋಭನರತ್ನಾಕರ

## (ದ್ವಿತೀಯ ಭಾಗ)

ಇದು ಮದುವೆ ಶುಭಶೋಭನಾದಿಗಳಲ್ಲಿ ಹೇಳುವ ಹಸೆಗೆ ಕರೆಯುವ ಹಾಡುಗಳೂ, ಶೋಭಾನೆ (ಆರತಿ) ಹಾಡುಗಳೂ ಇರುವ ಅಮೂಲ್ಯ ಗೀತಗಳ ಸಂಗ್ರಹ.



ಯಾ ಪತಿಂ ಹರಿಭಾವೇನ ಭಜೇಚ್ಛ್ರೀರಿವ ತತ್ಪರಾ ।
ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥ ೧ ॥




ಪ. ನಾರಾಯಣ ಪ್ರಭುರಿಂದ ಸ್ವಕೀಯ
ಉಡುಪಿ ಪ್ರಭಾಕರ ಮುದ್ರಾಯಂತ್ರದಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು.

1931.



ಬೆಲೆ, ೦-೪-೦] [ಟ. ಖ. ಬೇರೆ.

## ಹೆಂಗಸರಿಗೆ ಉಪಯುಕ್ತವಾದ ಪುಸ್ತಕಗಳು.

ಶೋಭನ ರತ್ನಾಕರ ೧ನೇ ಭಾಗ—(ಇದು ಮದುವೆ ಮುಹೂರ್ತ ಲಾಗಾಯ್ತು ಅವಭೃತದ ವರೆಗೆ ಹೇಳತಕ್ಕ ಗೀತಗಳ ಸಂಗ್ರಹ) 0—4—0

2. ಶೋಭನ ರತ್ನಾಕರ ೨ನೇ ಭಾಗ—(ಇದು ಮದುವೆ ಶುಭಶೋಭನಾದಿಗಳಲ್ಲಿ ಹೇಳತಕ್ಕ ಅನೇಕತರದ ಹಸೆಗೆ ಕರೆಯುವ, ಶೋಭಾನೆ (ಆರತಿ)ಹಾಡುಗಳು ಅಡಗಿರುವ ನವನಾರಿಯರ ಗಾನ ಭಾಂಡಾರ) 0—4—0

3. ಗೀತಾವಳಿ—(ಇದರಲ್ಲಿ ಬಾಗಲು ತಡೆಯುವ ಹಾಡು, ರುಕ್ಮಿಗೆ ಹೂ ಮುಡಿಸಿದ ಹಾಡು, ಸೀತಾದೇವಿಗೆ ಹಸೆಗೆ ಕರೆದ ಹಾಡು, ರಾಮ ಕೃಷ್ಣರ ಆರತಿಗಳು ಕೂಡಿರುವುದು) ... ... 0—1—6

4. ನಾರಾಯಣ ಸ್ತವನ ಮಣಿಮಾಲೆ- (ಹಾಡು) ... ... 0—1—0

6. ಮಂಗಳಗೌರಿ ಹಾಡು- (ಇದು ಹೆಂಗುಸರು ಆಚರಿಸತಕ್ಕ ವ್ರತದ, ಪರಿಶೋಧಿಸಿ ತಿದ್ದಲ್ಪಟ್ಟ ಹಾಡುಗಳ ಪುಸ್ತಕವು) ... 0—1—0

7. ಮಂಗಳಗೌರಿ ಹಾಡು- (ಪೂಜಾವಿಧಿ ಸಹಿತ) .. 0—1—6

8. ಶ್ರೀ ಸತ್ಯನಾರಾಯಣ ಕಥೆ- (ಹಾಡು) ... ... 0—1—6

9. ಗೋವಿನ ಕಥೆ- (ಹಾಡು) ... ... ... 0—2—0

10. ಜೋಗುಳ ಪದಗಳು ... .. ... ... 0—1—0

11. ರಾಮಕೃಷ್ಣ ಭಜನ ... ... ... ... 0—1—0

12. ಮನೋಪದೇಶ ... ... ... ... 0—0—6

13. ಶ್ರೀರಾಮಸ್ತುತಿ ... ... ... ... 0—0—6

14. ವೆಂಕಟೇಶ ಸ್ತೋತ್ರ ... ... ... ... 0—1—0

## ಕನ್ನಡಲಿಪಿ ಕೊಂಕಣಿ ಭಾಷೆಯ ಪುಸ್ತಕಗಳು.

15. ಸ್ವರ್ಣಗೌರೀ ಹಾಡು ... ... ... .. 0—0—9

16. ಭಕ್ತ ದಾಮಾಜಿಪಂತ ಹಾಡು ... ... ... 0—1—0

17. ಭಕ್ತ ಚೋಖಾಮೇಳು ಹಾಡು ... .. .. 0—1—0

18. ಸಂತ ಸಖೂಬಾಯಿ ಹಾಡು ... ... 0—1—0

19. ಯಶೋದೆಯ ಸಂಕಷ್ಟ ಚತುರ್ಥಿ ವ್ರತ ಹಾಡು ... 0—0—6

20. ಕನ್ಯೋಪದೇಶ ಹಾಡು—(ಹುಡುಗಿಯರಿಗೆ ಶೃಂಗಾರ ಪುಷ್ಪ) 0—1—0

21. ಕಾಳೀಯಮರ್ದನ ಹಾಡು- 0—0—6

22. ದ್ರೌಪದೀ ವಸ್ತ್ರಾಪಹರಣ ಹಾಡು ... ... ... 0—0—6

23. ಧ್ರುವಚರಿತ್ರೆ ಹಾಡು ... ... ... ... 0—0—9

24. ಹರಿಚಂದ್ರಾಖ್ಯಾನ ... ... ... ... 0—2—0

25. ವಿವೇಕ ರತ್ನಾಕರ- (ಅಭಂಗಗಳು ಮರಾಠಿ ಲಿಪಿ) ... 0—2—0

26. ಪ್ರಹ್ಲಾದ ಚರಿತ್ರೆ ನಾಟಕ ... ... ... 0—8—0

27. ಚಂದ್ರಹಾಸ ನಾಟಕ ... ... ... ... 0—4—6

28. ಸ್ತ್ರೀಜಪವಿಧಿ- (ಸ್ತ್ರೀಯರ ನಿತ್ಯಾಹ್ನಿಕದ ಟಿಪ್ಪಣಿ ಸಹಿತ) ... 0—1—0

# ಶೋಭನರತ್ನಾಕರ IIನೇ ಭಾಗದ ಅನುಕ್ರಮಣಿಕೆ.

ಶೋಭನರತ್ನಾಕರದ ಅನುಕ್ರಮಣಿಕೆಯು ಸಮಾಪ್ತವು.

॥ ಶ್ರೀಗಣೇಶಾಯ ನಮಃ ॥

॥ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ ॥

# ಶೋಭನರತ್ನಾಕರ.

(ಭಾಗ ೨.)

## ಹಸೆಗೆ ಕರೆಯುವ ಹಾಡುಗಳು.

॥ ೧ ॥ ರಾಗ ಮಧ್ಯಮಾವತಿ [ಧಾಟಿ - ಶ್ರೀರಾಮಾ ಪಾವನನಾಮ] ಏಕತಾಳ

ಏಳು ಸದ್ಗುಣಧಾಮ ಹಸೆಗೀಗ ಮುದದೀ । ಶ್ರೀಲಲಾಮನೆ ಲೋಕಪಾಲ ಸಂತಸದೀ । ಜಾಲವೆಲ್ಲವು ದೇವ ಕುಂದಿನೀ ಪುರದಾ । ಶೀಲ ಭೀಷ್ಮಕ ಭೂಪ ನರಸೀಯು ಪಡೆದಾ ॥ ಬಾಲೆ ರುಕ್ಮಿಣಿ ತವಲೀಲೆಯ ಕೇಳ್ದು ವಿ । ಶಾಲ ಮನವಿ ಲಿಖಿತೋಲೆಯ ಬರೆದು ನಿ । ನ್ನಾಲಯ ಕಟ್ಟಿದ ನೂಳಿಗ ದ್ವಿಜನುಡಿ । ಯಾಲಿಸಿ ಬಂದ ಕೃಪಾಳು ಈ ರಮಣಿಯ । ನಾಳಿಕೊಳ್ಳಯ್ಯಾ ಹಸೆಗೇಳೂ ॥ ಶೋಭಾನೆ ॥ ೧ ॥ ಮಂಡಲ ಮಧ್ಯದೀ ಗೋಕುಲದೊಳಗೇ । ಹಿಂಡೆ ಪೂತನಿಯ ಪ್ರಾಣವಗೊಂಡ ಘಳಿಗೇ । ಭಂಡೀಯ ತುಳಿದು ಪಾದದಿ ವಾತಾಸುರನಾ । ಖಂಡೀಸಿ ಬಕನೆಂಬ । ಧಡಿಗ ದಾನವನಾ ॥ ರುಂಡವ ಸೀಳಿ ಉದ್ಧಂಡ ಪ್ರಲಂಭನ । ತಂಡ ಬಡಿದು ಕಾಳಿಂದಿಯ ಕದಡಿ ತುರು । ಹಿಂಡೆಬ್ಬಿಸುತ ಪರ ಹೆಂಡರಿಗೊಲಿದಖಿ । ಲಾಂಡ ದೊಡೆಯ ಸುಪ್ರಚಂಡ ಶ್ರೀದೇವಿಯ । ಗಂಡನಾಗೇಳೂ ಹಸೆಗೀಗ ॥ ಶೋಭಾನೆ ॥ ॥ ೨ ॥ ಕಲ್ಲೀ ಕೊಳನೆಯುಂಡು ಮಧುರೇಗೆ ನಡದೂ । ಅಲ್ಲಿ ಮಾರ್ಗದಿ ರಾಜ ರಜಕನ ಬಡಿದೂ । ಬಲ್ಲೀದ ಮಾಲೆಗಾರನಿಗಿತ್ತು ಸುಖವೂ । ನಿಲ್ಲದೆ ಕುಬುಜೇಗೆ ಕೊಡುತ ಸಂಪದವೂ ॥ ಬಿಲ್ಲ ಮುರಿದು ಖಳ ಮಲ್ಲರನೆಲ್ಲರ । ಚಲ್ಲ ಬಡಿದು ಸುರಧಲ್ಲಣ ಕಂಸನ । ಹಲ್ಲ ಕಳಚಿ ಪುರವೆಲ್ಲವ ಝೋಯನೆ । ಭುಲ್ಲವಿಸಿದ ಹೇ ಗೊಲ್ಲ ಶ್ರೀದೇವಿಯ । ನಲ್ಲನಾಗೇಳೂ ಹಸಗೀಗ ॥ ॥ ಶೋಭಾನೆ ॥ ೩ ॥ ಬಿಡದೇ ಮಾಗಧ ಚೈದ್ಯ ಹಂಸ ಡಿಬಿಕರನೂ । ಬಡಿದೂ ಮುರನರಕಾದಿ ದಂತ ವಕ್ರರನೂ । ಪೊಡವೀಯ ಭಾರವ ನಿಳುಹಿಸಿ ಮುದದೀ । ತಡೆಯದೆ ಭಕತರಿಂಗಿಡುತ ಸಂತಸದೀ ॥ ಪಿಡಿಯುವಲನು ದ್ವಿಜ

ಕೊಡಲು ಸೌಭಾಗ್ಯವ । ಕೊಡುತ ಗಜೇಂದ್ರಗೆ ಧ್ರುವಗೆ ದ್ರುಪದಜೆಗೆ ಬಂ । ದೆಡರ ನೀಗಿಸಿದ ನಮ್ಮೊಡೆಯ ಶ್ರೀಕೃಷ್ಣ ನಿ । ನ್ನಡಿಗೆರಗುವೆವು ಈ । ಮಡದಿ ರತುನಕೆ ನೀ । ನೊಡೆಯನಾಗೇಳೂ ಹಸೆಗೀಗ ॥ ಶೋಭಾನೆ ॥ ೪ ॥ ಸಲಹಿ ಯಾದವರಾ ಬಂಧನವೆಲ್ಲ ಬಿಡಿಸೀ । ಒಲಿದು ಪಾಂಡವ ರಾಜಸೂಯುವ ನಡಿಸೀ । ಕಲಹ ತಂದೊಡ್ಡೀ ಕೌರವರೊಳು ನರಗೇ । ಗೆಲಿಸಲೋಸು ಗವೇ ಭಂಡಿಯ ಭೋವನಾಗೇ ॥ ವಲಿದು ರಣಾಗ್ರದಿ ಕಲಿ ಕಡುರಥಿಕರ । ಬಲಿಗೊಲಿಸುತ ಕ್ಷಿತಿಯಲಿ ಸತ್ಕೀರ್ತಿಯು । ತಳೆದು ಮೆರದ ಮುಖಭಲದಂಕನೆ ಈ । ಲಲನೆ ಲಜ್ಜಿಸಿ ನಿನಗಳುಕುವಳ್ಕ ಮನ।ನಲಿದು ಬೇಗೇಳೂ ಹಸೆಗೀಗ ॥ ಶೋಭಾನೆ ॥ ೫ ॥ ಬಾರೋ ಶ್ರೀಹರಿಯೇ ವೇದವ ತಂದ ಧೊರೆಯೇ । ಬಾರೋ ನಿರ್ಜರರಿಂಗೆ ಸುಧೆಯಿತ್ತ ಶಿರಿಯೇ । ಬಾರೋ ಹೇಮಾಕ್ಷ ಗರ್ವ ವನಪಹಾರಿ । ಬಾರೋ ಬಾಲನ ಕ್ಯಾದವನೆ ಹೊಂತಕಾರೀ ॥ ಬಾರೋ ನಡಿಯಿಡೊ ಬಾರೊ ಕ್ರೋಧವ ಬಿಡೊ । ಬಾರೊ ಸತಿಯ ಕರೆ ಬಾರೊ ಕೀರ್ತಿಯ ಮೆರೆ। ಬಾರೊ ನಾಚಿಸದಿರು ಬಾರೊ ತೇಜದೊಳಿರು । ಬಾರೊ ಈ ರಮಣಿಯ ನೀರ ನೀನಾಗುತ । ಬಾರಯ್ಯ ಹಸೆಗಾಸನವೇರೂ ॥ ಶೋಭಾನೆ ॥ ೬ ॥ ಸೊಗಯಿಪ ದ್ವಾರಕಾ ಪುರದ ರಾಜೇಂದ್ರಾ । ಮಿಗಿಲು ಯಾದವ ವಂಶಾಂಬುಧಿ ಪೂರ್ಣಚಂದ್ರಾ । ಜಗದೊಳತ್ಯಧಿಕಾ ಮಾಲಿಕಯು ಪತ್ತಣದೀ । ಝಗಝಗಿಸುವ ದೇವಾಲಯದೊಳುತ್ಸವದೀ ॥ ನಿಗಮ ನಿಕರ ಗಳು ಪೊಗಳಲು ಮಿಗೆ ನಸು । ನಗುತ ರಮಾಧವ ಸುಗುಣನೆ ಬಾರೆಸ । ಮುಗುಡೆ ರುಗ್ಮಿಣಿ ಸಹಿತಗಲದೆ ಯಾಸನ । ಮಿಗೆ ಬಂದಡರಲು ಬಗೆ ಗಾರ್ತಿಯರು ಕೈ । ಮುಗಿದು ಶೇಸೆಯನೂ ತಳಿದರೂ ॥ ಶೋಭಾನೆ ॥ ೭ ॥

॥ ೨ ॥ ರಾಗ [ನನ್ನ ಪಾಲಿಸಯ್ಯ । ಪನ್ನ ಗ್ರೀಶವಾಸ] ತಾಳ

ಎದ್ದು ಬಾರೊ ಹಸಗ । ಮುದ್ದು ಬಾಲಕೃಷ್ಣಾ । ಎದ್ದು ನಿನ್ನನೋಡಿ ಕೊಂಡು ಧನ್ಯಳಾದೆ ॥ ಪಲ್ಲ ॥ ಗೋಕುಲದಿ ಹುಟ್ಟಿ । ಗೋವ್ಗಳನ್ನು ಕಾಯ್ದು । ಸೊಕ್ಕಿಬಾತ ನೀನು । ಸಲಹು ಎನ್ನಯ ವದನಾ ॥ ೧ ॥ ಸೃಷ್ಟಿ ಗೀಶ ಪೀಶಾ । ಉಡುಪಿಯಲ್ಲಿ ವಾಸಾ । ದಾಸರನ್ನು ಕಾಯ್ವ । ಸ್ವಾಮಿಗೀ ಶೈವದನಾ ॥ ೨ ॥ ಮರವ ಯೇರು ಎಲ್ಲಾ । ಉಡುವ ಸೀರೆ ಕದ್ದು । ಮರವನೇರಿ ನೀನು । ಮಾಯಕಾರಿ ಕೃಷ್ಣಾ ॥ ೩ ॥ ಶ್ರೀ ॥

॥ ೩ ॥ ರಾಗ, ಸಾವೇರಿ [ಧಾಟಿ - ರಂಗನ ಪರಿಣಯ ಐದನೆ] ಅಷ್ಟತಾಳ

ಧರೆಯು ಭಾರವ ಪರಿಹರಿಸಲು ದಶರಥ । ಸುರದೊಳು ಸಂಜನಿಸಿ । ಕೌಶಿಕಮುನಿ । ವರನ ಮಾತನು ಲಾಲಿಸಿ । ತಾಟಕಿಯನು । ಭರದಿಂದ ಸಂಹರಿಸಿ । ಯಾಗವನು ನಡಿಸಿ ॥ ವರ ಮುನೀಂದ್ರನ ಸತಿಯ ಶಾಪವ । ಚರಣದಲಿ ಪರಿಹರಿಸಿ ಮಿಥುಳಾ । ಪುರ ಪ್ರವೇಶದಿ ಹರನ ಧನುವನು । ಮುರಿದು ಸೀತೆಯು ಕರವಿಡಿದ ರಘು । ವರನೆ ಬಾ ಹಸೆಗೆ ಕರೆದರು ॥ ॥ ಶೋಭಾನೆ ॥ ೧ ॥ ಪರಶುರಾಮನ ಬಲ ಬಲುಮೆಯ ಸೆಳದು । ಹರುಷ ದಿಂದಾಯೋಧ್ಯವಾ । ಸೇರಲು ಕೈಕ । ಸ್ಮರಿಸಿ ಪೂರ್ವದ ವರವಾ । ಕೇಳುತ ಬಲು । ಕರಗಿ ಚಿಂತಿಸುತಿರುವಾ । ತಂದೆಯ ಭಾವ ॥ ಪರಮ ಪ್ರಿಯದಿಂ ಕೇಳಿ ವಾಕ್ಯವ । ಧರಣಿ ನಿಜಸುತ ಅನುಜ ಸಹಿತಾ । ಬರುತ ಗಂಗಾನದಿಯ ತೀರದಿ । ಪರಮ ಮಿತ್ರನ ಗೃಹದೊಳಿರುತಿರೆ । ರಘುವರನೆ ಬಾ ಹಸಗೆ । ಕರೆದರೂ ॥ ಶೋಭಾನೆ ॥ ೨ ॥ ಬರುತ ಮಹಾರಣ್ಯದೊಳಗೆ ವಿರಾಧನ । ಮುರಿದು ಶೂರ್ಪಣಖಿಯನು । ನಾಸಿಕ ಕರ್ಣ । ತರಿದು ಪ್ರಖ್ಯಾತಿಯನು । ಬರಲು ತ್ರಿಶಿರ । ಖರದೂಷಣಾದ್ಯರನು । ಮಾಡಿ ಖಂಡವನೂ ॥ ಮರುಳು ಮಾಯಾ ಮೃಗವು ಸುಳಿಯಲು । ತರುಣೆ ನೆನುತಲಿ ಪರ್ಣಶಾಲೆಯೊ । ಳಿರಿಸಿ ತಮ್ಮನ ಕಾವುದೆನುತಲಿ । ಹೊರಟು ಮಾರೀಚನನು ತರಿದ । ಧರಣಿಪ ಬಾ ಹಸಗೆ ಕರದರೂ ॥ ಶೋಭಾನೆ ॥ ೩ ॥ ಚಿತ್ರವಾಗಿಹ ಭಾರದ್ವಾಜರಾಶ್ರಮದಿಂದಿ । ನೇತ್ರದಿ ಕಂಡು ನಿಂದು । ಅಲ್ಲಿಂದಾಚೆ । ಚಿತ್ರಕೂಟಕೆ ಬಂದು । ಸೇರಲು ಭರತ । ಸತ್ಯದ ಗತಿ ನೆನದು । ಚರಣಕ್ಕೆ ಮಣಿದು ॥ ಧಾತ್ರಿಯನು ಪಿಡಿದೆತ್ತಿ ಪಾದುಕ । ಇತ್ತು ದಯದಿಂ ಮತಿಯ ಬೋಧಿಸಿ । ಅತ್ರಿ ಮುನಿಯನು ಕರಿಸಿದನು ಆ । ಪಿತೃ ಸುತನನು ಮನ್ನಿಸಿದ ಸಜ್ಜನ । ಮಿತ್ರನೆ ಬಾ ಹಸೆಗೆ ಕರದರೂ ॥ ಶೋಭಾನೆ ॥ ೪ ॥ ಖೂಳ ರಾವಣನು ಸೀತೆಯನಪಹರಿಸಲು । ನಾರಿಯ ಕಾಣದ ಅರಸಿ । ಜಟಾಯುಗೆ ವಿ । ಚಾರಿಸಿ ಗತಿಗೆ ಸೇರಿಸಿ । ಕಬಂಧನ । ಘೋರ ರೂಪವ ಭೇದಿಸಿ । ಶಬರಿ ಸಂಗ್ರಹಿಸಿ ॥ ಸಾರವಾಗಿಹ ಫಲವ ಭಕ್ಷಿಸಿ । ಮಾರುತಿಗೆ ಪ್ರಿಯ ವಾಕ್ಯವೆನುತಲಿ । ಸೂರ್ಯಸುತ ಸುತನೆನುತ ದುಂದುಭಿ । ಘೋರತನ ಉಗುರಿಂದ ಮೆಟ್ಟಿದ । ಧೀರನೆ ಬಾ ಹಸೆಗೆ ಕರದರೂ ॥ ಶೋಭಾನೆ ॥ ೫ ॥ ಏಳು ತಾಳಿಯ ಎಡ

ಕಾಲಿನಿಂ ಭೇದಿಸಿ । ವಾಲಿಯ ಭೂಮಿಯೊಳಿಳಿಸಿ । ಸುಗ್ರೀವಗೆ ಪ್ರತಿ ಪಾಲಿಸಿ ರಾಜ್ಯವನಾಳಿಸಿ । ಮುದ್ರಿಕೆಯಿತ್ತು । ಲಾಲಿಸಿ ಹನುಮನ ಭೋಧಿಸಿ । ಕಳುಹೆ ಹೂಂಕರಿಸಿ ॥ ಮೇಲೆ ನಡೆದಾ ವನದಲಸುರೆಯು । ಶೀಳಿ ಉಂಗುರ ಕೊಟ್ಟು ಸೀತೆಗೆ । ಹೇಳಿ ವೃತ್ತಾಂತವನು ನೆಟ್ಟನೆ । ಜಾಲದಲಿ ಶಿಖಿಯಿಟ್ಟ ಪವನಜ । ನಾಳಿದ ಬಾ ಹಸೆಗೆ ಕರದರೂ ॥ ಶೋಭಾನೆ ॥ ೬ ॥ ಸೀತೆ ಕ್ಷೇಮವ ರಘುನಾಥಗೆ ಪೇಳಲು । ಆತನ ವಯದಿ ನೋಡಿ । ಸೈನ್ಯವು ಗೂಡಿ । ಸೇತು ಬಂಧನವಮಾಡೀ । ದಾಟುತ ಅಸುರ । ದೂತರ ಶಿರ ಚಂ ಡಾಡಿ। ರಕ್ತವಿಂ ಕೂಡಿ॥ ಭೂತತತಿಯಾಹಾರವಿತ್ತು ಪ್ರ । ಖ್ಯಾತದಿಂದ ವಿಭೀಷ ಣಗೆ ಅತೀ । ಪ್ರೀತಿಯಿಂ ಲಂಕೆಯನು ಕೊಟ್ಟನು । ಜಾತ ಸಹಿತಲೆ ಪ್ರೀತಿ ಯಿಂ ರಘು । ನಾಥನೆ ಬಾ ಹಸಗೆ ಕರದರೂ ॥ ಶೋಭಾನೆ ॥ ೭ ॥ ಸುರಗಿ ಪುಷ್ಪಕ ಸೋನೆ ಮು । ರುಗಿ ದುಂದುಭಿಯುರು । ಸುರರು ನಾಟ್ಯಗಳನಾಡೆ । ದಿವ್ಯ ಪುಷ್ಪಕವ । ಭರದಿಂದ ತಂದು ನೀಡೆ । ಜಾನಕಿ ಸಹಿತ । ತ್ವರಿತದಿಂದೇ ರಿದಡೆ । ಅರಿತದನು ಕೂಡೆ ॥ ಭರತನಿಗೆ ಸುದ್ದಿಯನು ಕಳುಹಲು । ಬರುವೆ ನೆನುತ ಪ್ರತಿಜ್ಞೆ ಸಹಿತಲೆ । ಬರುತ ಗಂಗಾನದಿಯ ತೀರದಿ । ಪರಮ ಮಿತ್ರನ ಗೃಹದೊಳಿರೆ ರಘು । ವರನೆ ಬಾ ಹಸೆಗೆ ಕರದರೂ ॥ ಶೋಭಾನೆ ॥ ೮ ॥ ಬಂದು ಅಯೋಧ್ಯದಿ ವಂದಿಸಿ ಜನನಿಯ । ಸಿಂಧು ಜಲವತೂರಿಸಿ । ಸತಿ ಪತಿ ಸಹಿತ । ಗಂಧ ಮಾಲೆಯ ಧರಿಸಿ । ಕುಳಿತಿರ ಸುರ । ವೃಂದ ಪೂಮಳೆ ಸುರಿಸಿ । ಕೀರ್ತಿಯನು ಮೆರಸಿ ॥ ಹಿಂದೆ ಪೇಳಲು ರಾಮ ಬ್ರಹ್ಮಗೆ ಆ । ನಂದ ಗುರುರೂಪಾಯ ಈ ಕಥೆ । ಒಂದು ದಿನದೊಳು ಕೇಳಿದರಿಗಾ । ನಂದ ಪದವಿಯ ಕೊಡುವ ದಶರಥ ॥ ನಂದನ ಬಾ ಹಸೆಗೆ ಕರದರೂ ॥ ಶೋ ಭಾನೆ ॥ ೯ ॥ ಶ್ರೀಃ ॥

॥ ೪ ॥ ರಾಗ, ಮಧ್ಯಮಾವತಿ [ಧಾಟ.- ಶ್ರೀಶಾ ಕೊಳಲನೂದುತ] ಆದಿತಾಳ

ಗೌರೀಯಾವರ ಸುತನಾ ಭಜಿಸೀ । ಶಾರದೆಯನ್ನು । ಸ್ಮರಿಸೀ ನಾಪೇಳ್ವೆ ವಿಸ್ತರಿಸಿ । ಜನಕ ನಂದನೆ ಜಾನಕಿಯರು ಪಾಡುತ । ಕನಕಮಯದಿ ಮುತ್ತಿನ ಹಸೆಗೆ ಜಗುಲಿಯು॥ವನಿತೆಯರು ಪಾಡಿ ಪೊಗಳುತ ॥ ಶೋಭಾನೆ ॥ ೧ ॥ ಹೊನ್ನ ಪುತ್ಥಳಿ ಪೊಸ ಗೊಂಬೆ । ಮುಖ ಚಂದ್ರ ಬಿಂಬೆ । ಕನ್ನಡಿ ಕದಪಿನ ರಂಬೆ । ನಿನಗ್ಯಾರೆಣೆ ಎಂಬೆ ॥ ಚನ್ನ ಶ್ರೀರಾಮನ ಮೋಹದ ರಂಬೆ ।

ವರ್ಣಿಸಿ ಕರೆವೆನು ಹಸೆಗೇಳೆಂಬೆ ॥ ಕನ್ನಡಿ ಜಾಣೆಯರೂ ಕರದರೂ ॥ ॥ ಶೋಭಾನೆ ॥ ೨ ॥ ಧರುಣೀಯೊಳುದಿಸಿದ ಜಾತೆ । ಮೂರ್ಲೋಕ ವಿಖ್ಯಾತೆ । ಪರಮ ಪಾವನ ಪುಣ್ಯಚರಿತೆ । ಕುಶಲವರ ಮಾತೆ ॥ ತರುಣಿಯರರಸರ ಕರೆದು ಶೋಭನದಿ । ವಿರಚಿಸುವೆನು ನಾ । ಹರುಷದಿಂದಲಿ ನಮ್ಮ । ವರ ತರುಣಿಯರೂ ಕರದರು ॥ ಶೋಭಾದೆ ॥ ೩ ॥ ಪೊಳೆವ ಕರ್ಣದಲಿ ಪೊನ್ನೋಲಿ । ಬಾವಲಿಯುಮೇಲೆ । ಶಿರದೋಳ್ ಮುಡಿದ ಪೂಮಾಲೆ । ಬಹುಗುಣದ ಶೀಲೆ ॥ ಅಡಿಯಿಡುತೊಂದಿಗೆ । ಝಣಝಣರೆನುತಲಿ । ಮುದದಿ ಬಾರೆನುತಲಿ । ರಾಮ ಮುಂಗೈಗಿಣಿ ॥ ಅರಸಿ ಬಾರೆ ಹಸೆಗೆ ಕರದರೂ ॥ ಶೋಭಾನೆ ॥ ೪ ॥ ನವರತ್ನ ಹಸೆಯ ಪೀಠದಲೀ । ಜಾನಕಿ ಸಹಿತಲಿ । ದಶರಥ ರಾಮನ ಕೊರಳಲ್ಲಿ । ಆ ಸಮಯದಿ ಕೇಳಿ ॥ ಕುಸುಮ ಗಂಧಿನಿಯುರು ಸೆವಾಕ್ಷತೆ ಇತ್ತು । ಕುಶಲದಿಂದಲಿ ಯಾ । ಬೆಳದಾ ಕ್ಷಣದಲೀ ॥ ಅರಸಿಬಾರೆ ಹಸಗೇ ॥ ಕರದರೂ ಶೋಭಾನೆ ॥ ೫ ॥ ಕೊರಳಾ ಪದಕ ಮುತ್ತಿನಹಾರಾ । ಮಾಡುವ ವೈಯ್ಯಾರಾ । ಕರದೊಳು ಕಡಗಕಂಕಣದವೈಯ್ಯಾರಾ । ಮಾಡುವ ವೈಯ್ಯಾರ ॥ ಕಡು ಸೊಬಗಿನ ಕಾಮಿನಿರನ್ನಳೆ ಪಿಡಿ । ದೊಡಗೂಡುತ ಶ್ರೀರಾಮನ ಮುತ್ತೈಗಿಣಿ ॥ ಅರಸೇ ಬಾರೆ ಹಸೆಗೇ ಕರದರೂ ॥ ಶೋಭಾನೆ ॥ ೬ ॥ ವನಿತೆಯರ್ ನಗೆನೋಡಿ ಚಂದ । ಕೊರಳೊಳ್ ಶ್ರೀಗಂಧ । ಜನಕರಾಯನ ಮುದ್ದು ಕಂದ । ರಾವಣನಿಗೆ ॥ ವನಜನಾಭ ಶ್ರೀರಾಮನು ಕೊಂದ । ವನವನ ಪೊಕ್ಕು ಸೀತೆಯುತಂದ ॥ ಅನುಮಾನವ್ಯಾಕೊ ಹಸೆಗೇಳು ॥ ಶೋಭಾನೆ ॥ ೭ ॥ ಶ್ರೀಃ ॥

॥ ೫ ॥ ರಾಗ ನಾಯಕಿ [ಧಾಟಿ:- ಬಾರೆ ದಾಕ್ಷಾಯಿ.ಣಿ] ತ್ರಿವುಡೆತಾಳ

ಬಾರೋ ಹಸೆಗೆ ಈಗ । ಸುಂದರಾಂಗನೆ ಬೇಗ ॥ ಪಲ್ಲ ॥ ಭಂಗಾರದ ಮಂಟಪವ । ಶೃಂಗಾರವ ಮಾಡಿ । ಸಂಗೀತವ ಪಾಡಿ । ಭೃಂಗ ನಾಯಕಿಯರು ॥ ೧ ॥ ಸುರುಚಿರ ಭರಣಂಗಳು । ಲಾಲಿಸು ದೇವಾ । ಸುರಪುರ ಮಂದಿರ । ಹರಿಯೆ ಹಸೆಗೆ ಈಗ ॥ ೨ ॥ ಮುತ್ತೈದೆಯರು ಸುತ್ತು । ಮುತ್ತಲು ಕೂಡಿ । ಮುತ್ತಿನಾರತಿ ಕೈಯ । ಲೆತ್ತಿ ಕಾದಿರುವರು ॥ ॥ ೩ ॥ ಶ್ರೀಃ ॥

॥ ೬ ॥ ರಾಗ [ಧಾಟಿ.- ಬಟುವಾಗುಂತನ ದೇ ದೇಮಿ] ತಾಳ

ಹಸೆಗೇಳೈ ಶ್ರೀನಿವಾಸಮೂರ್ತಿ ನೀ । ಬಿಸಜಾಲಯೆ ಸಹಿತ । ಎಸೆವ ಪೀಠಕೆ । ನಸುನಗುತೀಗಲೀ । ಕುಸುಮಾಶ್ರಮದಾತಾ ॥ ೧ ॥ ಬ್ರಹ್ಮಾದ್ಯಮರರು ಪ್ರಾರ್ಥನೆ ಗೈವರು । ನಿಮ್ಮಡಿಗಳ ಬೇಡಿ । ಬ್ರಹ್ಮನು ತಾಸುರರತಿಗಳ ಬೇಡೈ । ತ್ವರಿತದಿ ದಯಮಾಡೈ ॥ ೨ ॥ ವಾಲೆಬರೆದು ತಾಂ ತರಿಸಿಕೊಂಡಳೆ । ಲೋಲಾಕ್ಷಿಯು ತಾನು। ನಸುನಗು ಭೂಪಾ ಗುಣಸಂಪನ್ನ । ತ್ವರಿತದಿ ದಯಮಾಡೈ ॥ ೩ ॥ ಸರ್ಪಶಯನ ನಮ್ಮಪ್ಪ ಪರಾತ್ಪರ । ಸರ್ವಾಂತರ್ಯಾಮಿ ॥ ತಪ್ಪುಗಳೆಲ್ಲಾ ಕ್ಷಮಿಸಲುಬೇಕು । ಗುರುರಾಮ ವಿಠಲಸ್ವಾಮಿ ॥ ೪ ॥

॥ ೭ ॥ ರಾಗ, [ಧಾಟಿ:- ಮುತ್ತು ಮಾಣಿಕದ ಮಂಟಪದಿ] ತಾಳ

ನೀರೊಳು ಕುಣಿಕುಣಿದಾಡಿ । ವೇದ । ಚೋರನ ಸಂಹಾರಮಾಡಿ । ವಾರುಧಿಭವ ನಿಮ್ಮನೋಡಿ । ಶೃತಿಸಾರವ ಪೇಳಿದ ಮತ್ಸ್ಯವತಾರನೆ । ಬಾರೆಂದು ಹಸೆಗೆ ಕರದರು ॥ ಶೋಭಾನೆ ॥ ೧ ॥ ಕಡಲಾದ್ರಿಯನು ಕಟಕಡದೂ । ದೊಡ್ಡ । ಕೊಡನೊಳಗಮೃತವನೊಯಿದು।ಬಿಡದೆ ದೇವತೆಯರಿಗೆಕರದೂ । ತಂದುಕೊಡಿರೆಂದು ಪೇಳಿದ ಕೂರ್ಮ ನೀ । ಬಾರೆಂದು ಕರದರೂ ಹಸೇಗೆ ಶೋಭಾನೆ ॥ ೨ ॥ ಬಾಯೊಳು ನೆಲ ಬಗೆಬಗೆದು । ಹಣ್ಣುಕಾಯಿ ಕಬ್ಬುಗಳನ್ನೆ ಜಗದೂ । ಮಾಯ ರಾಕ್ಷಸರನ್ನು ಗೆಲಿದೂ । ಸರುವಾಯು ಭೂಮಿಯ ತಂದ ವರಾಹ ನೀ । ಬಾರೆಂದು ವೈಯ್ಯಾರಿಯರು ಹಸೇಗೆ ಕರದರೂ ॥ ಶೋಭಾನೆ ॥ ೩ ॥ ಕಂದನ ನುಡಿ ಕೇಳಿಕೇಳಿ । ಅವನ । ತಂದೆ ಹಿರಣ್ಯನ ಶೀಳಿ। ಖಂಡ ಕರುಳವನ ಮಾಲೆ । ಆನಂದದಿ ಧರಿಸಿದ । ನರಸಿಂಹ ಬಾರೆಂದು । ಇಂದುವದನೆಯರು ಕರದರು ॥ ಶೋ ॥ ೪ ॥ ಬಲಿಯೊಳ್ ದಾನವ ಬೇಡಿ ಬೇಡಿ ದೊಡ್ಡ ನೆಲನ ಈರಡಿಯನ್ನೆ ಮಾಡಿ । ತಲೆಯಮೇಲೆ ಪಾದವೂರಿ । ಇಳೆಯೊಳಗಿರು ಪೋಗೆಂದ । ವಾಮನ ಬಾರೆಂದು । ಭಾಮೆಯರು ಕರದರು ಶೋಭಾನೆ ॥ ೫ ॥ ಕರದಲಿ ಖಡ್ಗವ ಪಿಡಿಪಿಡಿದೂ । ದೊಡ್ಡ ಪರ ರಾಯರನೆಲ್ಲ ಗೆಲಿದೂ । ವರ ಮುನಿಯ ಮಾತಿಗೊಲಿದೂ । ಮಾತೆ ಶಿರವನರಿದ ಪರಶುರಾಮನೀಭಾರೆಂದು ಋಷಿ ಪತ್ನಿಯರು ಹಸೆಗೆ ಕರದರು ॥ ಶೋಭಾನೆ॥ ೬ ॥ ಹರನಬಿಲ್ಲನೆ ಮುರಿಮುರಿದು ಸೀತಾ ಅರಸನೆನುತ ದೊರೆ ಮೆರದೂ । ಸುರ

ಮುನಿಯ ಮಾತಿಗೊಲಿದೂ । ರಾವಣಸುರರಗೆಲಿದ ರಘುವೀರಬಾರೆಂದು ಲಲನೆಯರು ಹಸೆಗೆ ಕರದರು ॥ ಶೋಭಾನೆ ॥ ೭ ॥ ತುರುಹಿಂಡುಗಳ ಕಾಯ್ದು ಕಾಯ್ದೂ । ವೀಣೆ ಪರಿಪರಿಯುಲಿ ಸ್ವರಗೈದೂ । ಕಿರುಮಳೆಯುಲಿತೊಯ್ದು ತೋಯ್ದೂ । ಬೆಟ್ಟಕಿರುಬೆರಳಲೆತ್ತಿದ ಶ್ರೀಕೃಷ್ಣ ಬಾರೆಂದು ಹರದೀಯುರು ಹಸೆಗೆ ಕರದರು ॥ ಶೋ ॥ ೮ ॥ ನಾರಿಯುರಾನೋಡಿನೋಡೀ । ಮುಂದೆ ದಾರಿಯ ಬಿಡದೆ ಹೋರಾಡಿ । ಲಲನೆಯರಾಭಂಗವಮಾದೀ । ಸತ್ಯವ್ರತವನಳಿದ ಬೌಧ್ಯನೆ ನೀಬಾರೆಂದು । ಶಶಿಮುಖಿಯರು ಹಸಗೆ ಕರದರು ॥ ಶೋಬಾನೆ ॥ ೯ ॥ ತೇಜಿಯನೆಯೇರಿಯೇರಿ । ದೊಡ್ಡ ಭಾಟ ದೈತ್ಯರನೆಲ್ಲ ಸೀಳಿ । ಕೋಟಿ ಭಾನು ತೇಜನೇರಿ । ಚಲ್ವ ಮೊಟುಗಾರ ಕಲ್ಕ್ಯ ಹಸೆಗೆ ನೀ ಬಾರೆಂದು । ವೈಯ್ಯಾರಿಯರು ನಗುತ ಕರದರು ॥ ಶೋಭಾನೆ ॥ ೧೦ ॥ ದಶರೂಪವನು ತಾಳಿತಾಳೀ । ಮುಂದೆ ಶಶಿಮುಖಿಯರ ನೊಡಗೂಡಿ । ವಸುಧೆವಳಗೆ ಸ್ಥಿರವಾಳಿ । ಇರುವಅಸುರಮರ್ದನ ನೀಗು ಶಶಿಮುಖಿ ಲಕ್ಷ್ಮಿಮಿಗು ಕುಶಲದಾರತಿಯ ಬೆಳಗೀರೆ ॥ ಶೋಭಾನೆ ॥ ೧೧ ॥ ಶ್ರೀಃ ॥

॥ ೮ ॥ ರಾಗ, ಸಾಂಗತ್ಯ [ಧಾಟಿ –ಮಗಳೆ ಜಾನಕಿ ನಿನ್ನಾ ।] ತ್ರಿವುಡೆತಾಳ

ಅಗಣಿತ ಮಹಿಮನ । ಮಿಗಿಲಾದ ಲೀಲೆಯನ್ನು । ಜಗದೊಳು ಮುನ್ನ । ಬಗೆಬಗೆಯಿಂದ ॥ ಬಗೆಬಗೆಯಿಂದಲಿ ಜಗವನು ರಕ್ಷಿಪ । ವಿಧವಿಧದವತಾರೀ ನರಹರೀ ॥ ಶೋಭಾನೆ ॥ ೧ ॥ ಉದಕದಿ ಮತ್ಸನಾದ । ಮೇದಿನಿಯ ಪೊತ್ತುನಿಂದು । ಮುದದಿ ಮೇದಿನಿಯ । ಕದ್ದೊಯ್ದದವನ ॥ ಕದ್ದೊಯ್ದದನುಜನ ಸವರಿದ । ಮದಗರ್ವಹಾರಿ ವರಹವತಾರೀ ॥ ಶೋ ॥ ॥ ೨ ॥ ತರಳ ಪ್ರಲ್ಹಾದನ । ಮೊರೆಯುನ್ನು ಕೇಳುತ । ಅರಮನೆದೀ । ನರಮೃಗನಾದಾ ॥ ನರಮೃಗ ರೂಪದಿ ದುರುಳನ ಸೀಳುತ । ತರಳನ ಕಾಯ್ದಾ ನಾರಸಿಂಹ ॥ ಶೋಭಾನೆ ॥ ೩ ॥ ಬಾಲ ವಾಮನನಾಗಿ । ಜಾಲ ಬಲಿಯ ಯಜ್ಞ । ಶಾಲೆಗೆ ಪೋಗಿ ದಾನಬೇಡಿ ॥ ದಾನವ ಬೇಡಿ ತ್ರಿವಿಕ್ರಮನಾಗುತ । ಲೀಲೆಯ ತೋರಿ ಕಾಯ್ದಾ ಬಲಿಯ ॥ ಶೋಭಾನೆ ॥ ೪ ॥ ಭೂಸುರನಾಗುತ । ಭಾಸುರಾಂಗ ಭಾರ್ಗವ । ಭಾಸಿಪ ಪರಶೂ ಕುಠಾರಿಯಲಿ ॥ ಕುಠಾರಿಯನ್ನೆ ಪಿಡಿದು । ದೋಶ ಕ್ಷತ್ರಿಯರ ನಾಶಗ್ಗೆದ ಪರಶು

ರಾಮ ॥ ಶೋಭಾನೆ ॥ ೫ ॥ ರಘುಕುಲ ಸಾರ್ವಭೌಮ । ರಾಘವ ಗುಣ ಧಾಮ । ಅಘ ಪರಿಪೂರ್ಣ ದಶಶಿರನ ॥ ದಶಶಿರನ ಚ್ಛೇದನ ಗೈಯುತಾ । ವಿಭೀಷಣನ ಕಾಯ್ದಾ ಶೀತಾರಾಮಾ ॥ ಶೋಭಾನೆ ॥ ೬ ॥ ಬಾಲ ಲೀಲೆಯ ತೋರಿ ಶೀಲ ಗೊ । ಸ್ತ್ರೀಯರಾ । ಮೇಳ ಹದಿನಾರು ಸಾವಿರವೂ ॥ ಹದಿ ನಾರು ಸಾವಿರವಲ್ಲದೆಅಷ್ಟವಾ । ಸ್ತ್ರೀಯರನು ಕೃಷ್ಣನು । ವರಿಸಿದನೂ ॥ ೭ ॥ ಜಿನ ತ್ರಿಪುರರು ವಂಶ ।ದೀನ ತನವ ಮಾಡಿ । ನ್ಯೂನವರ್ಜಿತನೂ । ಹಯ ವೇರಿದನೂ ॥ ಹಯವೇರುತಲೀ ಮ್ಲೇಂಛರ ವರ್ಗವ । ಹಾನಿಯ ಗೈದನೂ ಕಲ್ಕ್ಯವತಾರೀ ॥ ಶೋಭಾನೆ ॥ ೮ ॥ ನಿತ್ಯ ಸುಮಂಗಲಗೆ । ಉತ್ತಮ ರಮಾಪತಿಗೆ । ನಿತ್ಯಾತ್ಮಚ್ಯುತಗೆ । ಸತ್ಯಭಾಮೆಗೆ ॥ ಸತ್ಯಭಾಮಾ ರುಕ್ಮಿಣಿಗೆ । ಮೆಚ್ಚಿದ ಗೋಪಾಲಕೃಷ್ಣಗೆ ॥ ಮುತ್ತಿನಾರತಿಯಾ ಬೆಳಗಿದರೂ ॥ ಶೋಭಾನೆ ॥ ೯ ॥ ಶ್ರೀಃ ॥

॥ ೯ ॥ ರಾಗ [ಧಾಟಿ:- ಸರಸದಿ ನಾಗೋಲಿ ನಂತರದಿ]

ಮೃದುಭಾಷಿಣಿ ಗುಣಸದನ ಪ್ರವೀಣೆ । ನಿಧಿ ಸುಖ ಸೌಖ್ಯಾಪ್ರದ ಸತಿ ಜಾಣೆ ॥ ತ್ರಿದಶನಿಕರೆನುರ ಚದುರೆ ಶ್ರೀಜಾಣೆ । ಮುದದಿ ಶ್ರೀದೇವಿ ಹಸೆಗಿದರು ॥ ಶೋಭಾನೆ ॥ ೧ ॥ ವಾರುಧಿಶಯನ ಮುರಾರಿ ಮುಕುಂದಾ। ಮಾರಜನಕ ಕೃಪೆದೋರು ಗೋವಿಂದಾ । ನಾರಾಯಣ ಬಾರೊ ಸುಗುಣ ಸಾಂದ್ರಾ । ಧೀರನೆ ಬೇಗೇಳೂ ಹಸೆಗೀಗಾ ॥ ಶೋಭಾನೆ ॥ ೨ ॥ ಮೃದ ಮುಖ್ಯಾಮರಸುತ ತೆರಳೀಗಾ । ಕಡು ಬೆಡಗಿನೊಳಾನಂದದಿ ಬೇಗಾ । ಅಡಿ ಗೆರಗುವೆನು ಪಾಲಿಸು ನಮಗೀಗಾ । ತಡವ ಮಾಡದಿರು ಹಸೆಗೀಗಾ ಶೋಭಾನೆ ॥ ೩ ॥ ಬಾರೊನಮ್ಮ ಶ್ರೀದೇವಿ ಸರಸದಿ । ಬಾರೋ ನಮ್ಮ ಶ್ರೀದೇವಿ ಸರಸದಿ । ಬಾರೋ ನಮ್ಮ ಶ್ರೀಹರಿಯೆ ಸಂತಸದಿ ॥ ಬಾರೋ ತ್ರಿಭುವನುದ್ಧಾರಿಯೆ ಜವದಿ । ಬಾರೋ ಬಾರವ್ವಾ ಹಸೆಗೀಗ ॥ ಶೋಭಾನೆ ॥ ೪ ॥ ರತಿಪತಿ ಪಿತಗೆ ಯುಮೆಗೆ ನುತಿಸುತಿಸಿ । ಸತಿಯರೆಲ್ಲರು ಕರೆದು ಹಸೆಗಿರಿಸಿ ॥ ಜತೆಗೂಡಿಸಿ ಹಿತದಿ ಕುಳ್ಳಿರಿಸಿ । ರತುನ ದಾರತಿಯಾ ಬೆಳ ಗೀರೆ ॥ ಶೋಭಾನೆ ॥ ೫ ॥ ಶ್ರೀಃ ॥

॥ ೧೦ ॥ ರಾಗ ಜಂಜೋಟಿ [ಧಾಟಿ:- ಬೆರಗಾದೆನಮ್ಮ ನುಡಿವ ಕೊಳಲ] ಆದಿತಾಳ

ಲಕ್ಷ್ಮೀದೇವಿ ಬಾರೆ ಹಸೆಗೆ ಕರೆಯುವೆ ನಾನು । ದೇವಿ ॥ ಪಲ್ಲ ॥ ಧರ್ಮಾವರ ಬನಾರಸು । ಕಂಚಿಕೊರ್ನಾಡು । ದೇವಿ ॥ ನಾನಾಜಾತಿ ಶೀರೆಗಳನು ತಂದು ಉಡಿಸುವೆನು ನಾನು ॥ ೧ ॥ ಪಟ್ಟೆಕುಪ್ಪಸ । ಮುತ್ತಿನ ಬೊಟ್ಟು । ಕಾಲುಕಡಗವು । ದೇವಿ ॥ ನಾನಾ ಜಾತಿಯವುಗಳನ್ನು । ತಂದು ತೊಡಿಸುವೆನೂ ನಾನು ॥ ೨ ॥ ಮುತ್ತಿನ ಬುಗುಡಿ । ವಜ್ರದ ವ್ರೋಲೆ। ಕೆಂಪಿನ ಬುಲಾಕು । ದೇವಿ ॥ ನಾನಾ ಜಾತಿಯಾಭರಣಗಳ ತಂದು ತೊಡಿಸುವೆನೂ ನಾನು ॥ ೩ ॥ ಕಡಗ ಕಂಕಣ ಹಾರಪದಕ । ವಜ್ರದ ಉಂಗುರ । ದೇವಿ ॥ ನಾನಾ ಜಾತಿಯವುಗಳನ್ನು ॥ ತಂದು ತೊಡಿಸುವೆನೂ ನಾನು ॥ ೪ ॥ ಚಿನ್ನದ ಪಟ್ಟೆ ಗೆಜ್ಜೆ ವಂಕಿ । ಬಂದಿಸರಿಗೆಯು । ದೇವಿ ॥ ನಾನಾ ಜಾತಿಯಾಭರಣಗಳ । ತಂದು ತೊಡಿಸುವೆನೂ ನಾನು ॥ ೫ ॥ ಮರುಗಮಲ್ಲಿಗೆ ಜಾಜಿ ಸಂಪಿಗೆ । ಪಾದರಿ ಪುಷ್ಪಗಳಾ । ದೇವಿ ॥ ನಾನಾ ಜಾತಿ ಪೂಗಳನ್ನು ತಂದು ಮುಡಿಸುವೆನೂ ನಾನು ॥ ೬ ॥ ಪುಣುಗು ಜವಾಜಿ ಕುಂಕುಮ ಕೇಸರಿ । ಗಂಧ ಕಸ್ತೂರಿ । ದೇವಿ ॥ ನಾನಾ ಜಾತಿ ಗಂಧಗಳನು ತಂದು ಹಚ್ಚುವೆನೂ ನಾನು ॥ ೭ ॥ ಕದಳಿ ದಾಳಿಂಬ ಲಿಂಬೆ ನೇರಳೆ । ಚೋದ್ಯ ಫಲಗಳೂ । ದೇವಿ ॥ ನಾನಾ ಜಾತಿ ಫಲಗಳನ್ನು । ತಂದು ಈಯುವೆನೂ ನಾನು ॥ ೮ ॥

॥ ೧೧ ॥ ರಾಗ [ಧಾಟಿ:- ಹಸಗೇಳ್ಳೈ ಬೇಗನೆ] ಆದಿತಾಳ

ಹಸೆಗೇನೇ ಕರೆದರು । ಕರುಣಾಳು ರಾಮನಾ ॥ ಪಲ್ಲ ॥ ಧಾರುಣಿಗೊಡೆಯನ । ಧೀರ ಶ್ರೀರಾಮನ ॥ ನಾರಿಯರೆಲ್ಲರು । ಹೀರದ ಪೀಠಕೆ ॥ ೧ ॥ ದಶರಥ ಪುತ್ರನ । ಧಾರುಣಿಗಾತ್ರನ ॥ ಶಶಿಮುಖಿ ಸೀತೆಯು । ಕುಸುಮಾಕ್ಷಿಯರು ॥ ೨ ॥ ಸೃಷ್ಟಿಯೊಳ್ ಚಂಚಲಾ । ದೃಷ್ಟಿಯ ನಿಲಿಸಿದ ॥ ಪಟ್ಟಾಭಿರಾಮನ । ಪರಮ ಕಲ್ಯಾಣಿಗೆ ॥ ೩ ॥

॥ ೧೨ ॥ ರಾಗ, ಜಂಜೋಟಿ [ಧಾಟಿ:- ಶಾರದಾಂಬೆ ಸುಂದರತರ] ರೂಪಕತಾಳ

ಅಜನ ರಾಣಿ ಭುಜಗವೇಣಿ । ತ್ರಿಜಗದರಸಿ ಹಸೆಗೆ ಬಾರೈ ॥ ಪಲ್ಲ ॥ ಬಾಲಕಿಯರ ಬಿನ್ನಪವನು । ಲಾಲಿಸುತ್ತ ಕರುಣದಿಂದ ॥ ಜಾಲಗೈದ ಪಾರಮತಿಯು । ನೀಡುವವಳೆ ಹಸೆಗೆ ಬಾರೈ ॥ ೧ ॥ ಶಾರದಾಂಬೆ ಸಾರಸಾಕ್ಷಿ । ಭಾರತೀಯ ಭಾಗ್ಯನಿಧಿಯೆ ॥ ನಾರದಾದಿ ಯೋಗಿಗಳಿಗೆ । ಸಾರಮತಿಯ ನೀಡುವವಳೆ ॥ ೨ ॥

॥ ೧೩ ॥ ರಾಗ, ಹಿಂದುಸ್ಥಾನಿನೋಟ್ [ಧಾಟಿ:– ಸರಸೀರುಹಾಂಬಕಿ ನಿನ್ನಾ] ಏಕತಾಳ

ಇಂದಿರಾದೇವಿ ಬಾ । ಕುಂದಣ ಪೀಠಕೆ ॥ ಮಂದಗಮನದಿಂದ । ಬಂದೇರು ಪೀಠವ ॥ ಪಲ್ಲ ॥ ಭೂಸುರ ವರ್ಗವು । ಲೇಸುಲೇಸೆನುತಲಿ । ಶೇಷೆ ಪಿಡಿದು ಮುಂದ । ಹಾಸದಿ ಬಾರೆಂಬರ್ ॥ ೧ ॥ ಸರಸಿಜಲೋಚನೆ । ಉರಗವೇಣಿಯೆ ಬಹು । ಹರುಷದಿ ಬಾ ಬಾರೌ । ಮರಕತ ಪೀಠಕೆ ॥ ೨ ॥ ಮಂಗಳ ಗಾನವ । ಅಂಗನೆಯರು ಪಾಡಿ ॥ ಮಾಂಗಿರಿಪತಿಯ ಅ । ರ್ಧಾಂಗಿ ಬಾರೆನ್ನುವರ್ ॥ ೩ ॥

॥ ೧೪ ॥ ರಾಗ, [ಧಾಟಿ·— ಅಜನ ರಾಣಿ ಭುಜಗವೇಣಿ] ತಾಳ

ನಗುತ ನಗುತ ಬಾರೆ ಬೇಗ । ಝುಗಿಝುಗಿಸುವ ಹಸಗೆ ಈಗ ॥ ಪಲ್ಲ ॥ ರಘುರಾಮರ ಪ್ರಾಣರಮಣಿಗೆ । ಅಗಣಿತ ಗುಣಸೌಭಾಗ್ಯದಾಯಿನಿ ॥ ಅ.ಪ. ॥ ಹರುಷದಿಂದ ಜನಕಭೂಪ । ವಿರಚಿಸಿ ಧನುಯೋಗವನ್ನು ॥ ತರುಣಿಯು ಶೋಭೆ ದಾನವಮಾಡಿ । ಕರವ ಪಿಡಿದು ಧರಣಿಜಾತೆ ॥ ೧ ॥ ಮಣಿದುಬಿಟ್ಟ ಲಾಗಜೂಡಾ । ಮಣಿಯು ಮರಕುಶಯನವನ್ನು ॥ ರಣದಿ ರಣಿಯು ಗೆಲಿದು ಗೆಲಿದು । ಗುಣಮಣಿ ಶ್ರೀ ಜಾನಕಿದೇವಿ ॥ ೨ ॥ ಭರದಿ ರಾಘವೇಂದ್ರ ಬಂದು । ಹರನ ಧನುವ ಮುರಿದನೆಂದು ॥ ಕೊರಳೊಳು ಹಾರವನು ಹಾಕಿ । ಕರವ ಪಿಡಿದ ಧರಣಿಜಾತೆ ॥ ೩ ॥

॥ ೧೫ ॥ [ಧಾಟಿ'– ಚಿತ್ತಜನಯ್ಯ ಶ್ರೀಚಿತ್ರಕೇಶವಗೆ]

ಮುತ್ತಿನ ಹಸೆಯೊಳು ಚಿತ್ತಜನನ್ನು । ಮತ್ತಕಾಶಿನಿಯರು ಮುದದಿ ಕುಳ್ಳಿರಿಸಿ ॥ ಚಿತ್ತರಂಜನಗೈವ ವರಯುವತಿಯರನು । ವತ್ತಿನೊಳ್ ನಿಲಿಸಿ ಅರಸಿನವನ್ಹಚ್ಚಿಸುತಲಿ । ಅರ್ಥಿಯೊಳು ಶೇಷೇ ತಳಿದರೂ ॥ ಶೋಭಾನೆ ॥ ॥ ೧ ॥ ನಾಗವಲ್ಲಿಯು ಕ್ರಮುಕ ನಾರಿಕೇಳದೊಳು । ನಾಗವೇಣಿಯು ಮಡಲು ತುಂಬಿಸುತವರು ॥ ಪೂಗ ಚಂಪಕ ಮೊದಲಾದ ಪುಷ್ಪಗಳಿಂದ । ಭೋಗಶಯನ ಸತಿಯೆಂತಲಂಕರಿಸುತ । ಬೇಗದಲಿ ಶೇಷೇ ತಳಿದರೂ ॥ ॥ ಶೋಭಾನೆ ॥ ೨ ॥ ಸುಲಲಿತಾಂಗಿಯರೆಲ್ಲಾ ಕೂಡಿ ಸಂಭ್ರಮದೀ । ಚಲುವ ದಂಪತಿಗಳ ಪೊಗಳುತ್ತ ಮುದದೀ । ಹಲವು ತರದ ಗಾಯನದಿಂದ ಪಾಡುತ್ತ । ಪೊಳೆಯುವ ರತ್ನದಾರತಿಯನೆತ್ತುತಲೀ । ಪರಸುತ್ತಾ ಶೇಷೇ ತಳಿದರೂ ॥ ಶೋಭಾನೆ ॥ ೩ ॥ ಶ್ರೀಃ ॥

॥ ೧೬ ॥ ರಾಗ ಸುರುಟಿ [ಧಾಟಿ.- ಸಂತತಂ ಸುಖವಂತಳಾದೆನೆ] ರೂಪಕತಾಳ

ಬಾರೆ ನೀ ಬಲುಬೇಗನೇ ಹಸೆಗೆ । ಶ್ರೀಶಾರದಾದೇವಿ ॥ ಪಲ್ಲ ॥ ರನ್ನ ಧಸೆಮಣೆ ಎಣ್ಣೆ ಹಾಕಿದ । ಚಿನ್ನದಾಚಿತ್ರವು ಕೆತ್ತಿದಾ ॥ ಕನ್ನೆ ಹಸೆಮಣೆಗಿನ್ನು ದಯಮಾಡೆ । ಚನ್ನ ರಮಣಿ ಹೆಜ್ಜೆನಿಕ್ಕುತ ॥ ೧ ॥ ಪಾಣಿಯೊಳ್ ವರವೀಣೆ ಮಿಂಟುತ । ಜಾಣೆಸುರಮುನಿವಂದ್ಯ ಚರಣಳೆ । ಕಾಣಿಕೇಗಳನರ್ಪಿಸುವೆನು । ವೀಣೆಫಣಿಮೃದುವಾಣಿ ಹಸ್ತಳೆ ॥ ೨ ॥ ಮುತ್ತಿನಾರತಿ ಎತ್ತಿ ಪಾಡಿರೆ । ಚಿತ್ತಜನಕನ ಪತ್ನಿ ಪ್ರಿಯಳೆ ॥ ಮತ್ತಗಾಮಿನಿ ಚಿತ್ತಕಾಯಳೆ । ಮುತ್ತು ಕೆತ್ತಿದ ಚಿತ್ರದ್ಹಸೆಗೀಗ ॥ ೩ ॥

॥ ೧೭ ॥ ರಾಗ [ಧಾಟಿ:—ಹಸೆಗೇಳು ಚಂದದಿ । ರೂಪದಲಿ] ತಾಳ.

ಬಾಬಾ ಸಖಿ ಬಲು ಸುಂದರಿ । ಬಾರೆ ಹಸೆಗೆ ಬಲುಬೇಗನೆ ॥ ಪಲ್ಲ ॥ ಈ ಮಲ್ಲಿಗೆ ಬಹು ಚಲ್ವಿಯು । ಎಲ್ಲೆಲ್ಲಿಯು ಶೋಭಿಪುದು ॥ ನಲ್ಲೆಯರೂ ಉಲ್ಲಾಸದಿ । ತಲ್ಲಣಿಪೂ ದೀ ಪೀರಕೆ ॥ ೧ ॥ ಕದಳೀವನ ಮುದಗೊಳ್ಳುತ । ಚದುರಾನನೆ ಚದುರಾಂಬಕಿ ॥ ಸದನದೊಳು ವದಗೀರ್ಪುದು । ಪದುಮಾಕ್ಷಿಯೆ ಪದುಮಾಲಯೆ ॥ ೨ ॥ ಈ ಬಾಳೆಯ ಸಾಲಾಗಿಹ । ಮೇಲಾದ ಕೊನೆಗಳಿಂದ । ಇನ್ನು ನಡೆ ಸನ್ನುತಾಂಗಿ । ಉಲ್ಲಾಸದೊಳೀ ಪೀರಕೆ ॥ ೩ ॥

॥ ೧೮ ॥ ರಾಗ [ಧಾಟಿ:- ಚಂದ್ರನು ಮೂಡುವನೀಗಾ] ತಾಳ.

ಬಾರೆ ಬಾರೆ ಭಾಮಾಮಣಿಯೆ । ನಾರಿಯರು ಕರೆವರು ॥ ಪಲ್ಲ ॥ ಭಂಗಾರದ ಮಂಟಪಕೆ । ಅಂಗನೆಯರ್ ಶೃಂಗರಿಸೆ । ಕುಂದಣದ ಮಣೆ ಮೇಲೆ । ಮಂಗಳಾಂಗಿ ಬಂದುಕೂಡೆ ॥ ೧ ॥ ಉತ್ಸವದ ಮಂಟಪಕೆ । ರತ್ನಂಗಳು ಬಿಗಿದಿಟ್ಟಿವೆ ॥ ಕೆತ್ತಿರುವ ರತ್ನಗಳು । ಪಟ್ಟೆಯು ವಿಚಿತ್ರಗಳು ॥ ॥ ೨ ॥ ನಾರಿಯರು ಪಾಡುತಲಿ । ಹಾಡುಗಳ ಹೇಳುತಲಿ ॥ ಆರತಿಯು ನೆತ್ತಿದರು । ನಾರಾಯಣ ಲಕ್ಷ್ಮಿಮಿಗೆ ॥ ೩ ॥

॥ ೧೯ ॥ ರಾಗ, [ಧಾಟಿ·- ಬಾ ಬಾ ಸಖಿ ಬಲುಸುಂದರಿ] ರೂಪಕತಾಳ

ಹಸೆಗೇಳು ಚಂದದಿ । ರೂಪದಲಿ ಸುಂದರಿ ॥ ಪಲ್ಲ ॥ ಮುತ್ತು ಮಾಣಿಕ ಹಸೆಗಳ । ಅರ್ತಿಯಿಂದಲಿ ಬಾರೆ ಹಸೆಗೆ ॥ ಚಿತ್ತದಲಿ ಘನ ಸಹಿತ । ಮಿತ್ರೆ ನೀನು ಬಾರೆ ಹಸೆಗೆ ॥ ೧ ॥ ಬಡನಡುವಿಲಿ ಬಳಕುತಾ । ಮುಡಿದ ಮಲ್ಲಿಗೆ ಉದುರುತಾ ॥ ಕಡುಸುಖವನು ಸುರಿಸುತಾ । ಮಡದಿ ರನ್ನಳೆ ಬಾರೆ ಹಸೆಗೆ ॥ ೨ ॥ ವಂಕಿ ಸರಿಗೆ ತೋಳ್ಗಿಟ್ಟು । ಬಿಂಕದಲಿ ಬಾರೆ ಲಕ್ಷ್ಮಿಮಿ ॥ ಮುತ್ತುರತ್ನಸರವ ಹಾಕಿ । ಚಂದದಿಂದಲಿ ಬಾರೆ ಹಸೆಗೆ ॥ ೩ ॥

॥ ೨೦ ॥ ರಾಗ, ಬೇಗಡೆ [ಧಾಟಿ – ಭಾವನೆ ಬಳಲಿದೆ] ಅಟತಾಳ ಚಾಪು

ಬಾರೆ ಕೋಕಿಲವಾಣಿ। ಬಾರೆ ಬಂಭರವೇಣಿ ॥ ಬಾರೇ ಹಸೆಗೆ ರುಕ್ಮಿಣೀ। ನೀರೆ ಕಲ್ಯಾಣಿ ॥ ಪಲ್ಲ ॥ ಲೋಲನೇತ್ರೆಯೆ ನಿನ್ನ । ನೋಲೈಸುತಿರುವರು ॥ ನಾಳೀಕನಯನೆಯ । ರಾಲಸ್ಯವೇತಕೆ ॥ ೧ ॥ ಕೋಗಿಲೆಗಳ ಮೃದು । ರಾಗಕೆ ವನಲಕ್ಷ್ಮಿ ॥ ರಾಗವ ತಳೆಯುವಂ । ತೀಗಳಾನಂದದಿ ॥ ೨ ॥ ಪಂಕಜಾಂಬಕಿ ದಿವ್ಯಾ। ಲಂಕಾರಶೋಭಿತೆ ॥ ಬಿಂಕದಿ ಬಾರೆ ಶ। ಶಾಂಕಾರ್ಧ ಸಮುಫಾಲೆ ॥ ೩ ॥ ವರ ಯದುತಿಲಕ ಶ್ರೀ। ನರಸಿಂಹನೊಡಗೂಡಿ ॥ ಹರುಷದಿಂ ಬಾರೆ ಸುಂ । ದರ ಹಂಸಗಮನೆ ನೀಂ ॥ ೪ ॥

॥ ೨೧ ॥ ರಾಗ [ಧಾಟಿ.– ಹಸೆಗೆ ಬಾರೈ ಹರುಷದಿಂದ] ತಾಳ

ಹಸೆಗೆ ಬಾರೈ ಬಿಸಜನೇತ್ರೆ । ಕುಸುಮ ಗಂಧಿನೀ ॥ ಅಸುರವೈರಿ ಸುಜ ನೋದ್ಧಾರಿ । ಶಶಿಮುಖಿಯೆ ನೀ ॥ ಪಲ್ಲ ॥ ಕರಕೆ ಕಂಕಣ ಸರಿಗೆ ಸರವು । ಹರುಷದಿಂದಿರಲ್ ॥ ಜರಿಯ ಕುಪ್ಪಸವನೆ ತೊಟ್ಟು । ನಡೆದು ಬಾರೆಲೆ ॥ ॥ ೧ ॥ ಮುರವು ಜರಿವ ಮೂಗುತಿನಿಟ್ಟು । ಹೆರಳು ಭಂಗಾರ ॥ ಜರಿಯ ಸೀರೆಯನ್ನೆ ಉಟ್ಟು । ನಡೆದು ಬಾರೆಲೆ ॥ ೨ ॥ ನಡೆದು ಬಾರೆಲೆ ಮಡದಿ ರುಕ್ಮಿಣಿ । ಒಡೆಯನೆದುರಿಗೆ ॥ ಪೊಡವೀಶ ಭೀಮೇಶ ಕೃಷ್ಣನ । ಮಡದಿ ರುಕ್ಮಿಣಿ ॥ ೩ ॥

॥ ೨೨ ॥ ರಾಗ ಕಾಂಬೋಧಿ [ಧಾಟಿ:– ಎನ್ನ ಪಾಲಿಸೈಯ್ಯಾ ಘನ ಶ್ರೀನಿ] ಏಕತಾಳ

ಸನ್ನುತಾಂಗ ಕೃಷ್ಣಾ । ಸರಸೀರುಹಾಕ್ಷಾ ॥ ಪಲ್ಲ ॥ ನಿನ್ನ ಬೇಡಿ ಕೊಂಬೆ । ಬೇಗ ಬಾ ಹಸೇಗೆ ॥ ಅ. ಪ. ॥ ವೇದಚೋರನನ್ನು । ಬೇಗದಿಂ ಮರ್ದಿಸಿ ॥ ವಾದದಿಂ ಸುರರಂ । ಬೋಧಿಸಿ ಬಂದನೇ ॥೧॥ ಕೂರ್ಮ ರೂಪಿನಲ್ಲಿ । ಭಾರವ ಬೆನ್ನಿಲಿ ॥ ಧಾರುಣಿ ಧರವ । ಪೊತ್ತು ರಕ್ಷಿಸಿದೆ ॥ ೨ ॥ ಸುಂದರಾಕಾರನೇ । ಸೂಕರರೂಪನೆ ॥ ಕಂದನಿಗೊಲಿದಾ । ಕೇಸರಿ ರೂಪನೆ ॥ ೩ ॥ ಮೂರಡಿಭೂಮಿಯ । ದಾನವ ಬೇಡಿದೆ ॥ ಸುರಸಹಸ್ರ ದೊಳೆ । ನರಸರಹಳಿದೆ ॥ ೪ ॥ ಮಾತೆಯ ವಾಕ್ಯದಿಂ । ಮೌನಿಯ ವೇಷದಿಂ ಪ್ರೀತಿಯ ತೋರಿದ । ಯಶೋದಾಕಂದನೇ ॥ ೫ ॥ ಬತ್ತಲೆ ನಿಂತವನೇ । ಬೌದ್ಧಾವತಾರನೇ ॥ ಮತ್ತೆ ನೀವೆಲ್ಲವರ । ಆಳಿರ್ದ ಧೀರನೆ ॥ ೬ ॥ ಉದಧಿ ಯೊವಾಸನೇ । ಉರಗದಿ ನಿಲಯನೇ । ಬದರಿಯ ನಾಥನೇ । ಬ್ರಹ್ಮಾದಿ ವಂದ್ಯನೇ ॥ ೭ ॥

॥ ೨೩ ॥ ರಾಗ, ಸಾವೇರಿ [ಧಾಟಿ:- ಸರಸದಿ ನಾಗೋಲಿಯ ನಂತರದಿ] ಏಕತಾಳ

ಎಳದೊಳವಿನ ಪೋಲ್ವ ಪಾದಗಳಿಗೆ । ಥಳಥಳಿಸುವ ಗೆಜ್ಜೆ ಸರ ಪಣಿಯು ॥ ಅಣಿಮುತ್ತಿನ ಮಿಂಚು ಕಿರುಪಿಲ್ಲಿ । ಕಿರುಪಿಲ್ಲಿ ಕಾಲುಂಗುರ ನೆಂಟಿಗೆ ॥ ಹೊಳೆವುತಲೀ ದೇವೀ ಹಸೇಗೇಳೂ ॥ ಶೋಭಾನೆ ॥ ೧ ॥ ಕಂರದಿ ಮೂರೇಖೆ ಮಧ್ಯದಲೀ । ಪಂಚರತ್ನದ ಕಾಶಿಯ ತಾಳೀ ॥ ಎಂಚೆಡೆಯ ಮುತ್ತು ಬಲುಮಲಕು । ಬಲುಮಲಕುತ್ತಾತೆ ಮುತ್ತುಗಳಾ ॥ ಮಿತ್ರೆ ನೀನಿಟ್ಟು ಹಸೇ ಗೇಳೂ ॥ ಶೋಭಾನೆ ॥ ೨ ॥ ಹೂವಿನ ಸರ ಮೇಲೆ ಮಧ್ಯದಲೀ । ಮ್ಯಾಲೆಸೆವ ನೀಲ ಬಾವುಲಿಯು ॥ ಕೂಡೆ ಹೊನ್ನ ಪೋಲೆ ಚಲು ತುಂಬಾ । ಚಲು ತುಂಬಾ ರತ್ನ ಬಾವುಲಿಯ ॥ ಮಿತ್ರೆ ನೀನಿಟ್ಟು ಹಸೇಗೇಳೂ ॥ ಶೋಭಾನೆ ॥ ೩ ॥ ಸರ್ಪನ ಹೆಡೆಯುದಿಪ ಚಂದದಿ । ಕತ್ತಿಸಿದ ಲಾಗುಟ ಹೊಳೆಯೆ ॥ ಪುತ್ತಳಿಯ ಚವುರಿ ಜಡೆಗೊಂಡೆ । ಜಡೆಗೊಂಡೆ ಜಡೆಯ ಭಂಗಾರವ ॥ ಮುಡದಿ ನೀನಿಟ್ಟು ಹಸೇಗೇಳೂ ॥ ಶೋಭಾನೆ ॥ ೪ ॥ ಪಲ್ಲವ ನಂಬಿದ ಪೆಂಬೆರಳಿಂಗೆ । ಅಲ್ಲಲ್ಲಿ ಕೈಯುಂಗುರ ಹೊಳೆಯೆ ॥ ಮುಳ್ಳು ಖಡುಗದೋಲೆ ಚಳಕಿಯ । ದೋಲೆ ಚಳಕಿಯ ಮುಂಗೈಸರಪಣಿ ॥ ಮಿತ್ರೆ ನೀನಿಟ್ಟು ಹಸೇಗೇಳೂ ॥ ಶೋಭಾನೆ ॥ ೫ ॥ ಪಚ್ಚೆಯ ಸರ ಪವಳೆಯ ಸರವು । ಮುತ್ತಿನ ಸರ ರತ್ನದ ಸರವು ॥ ಅದರೊತ್ತಿಲಿ ಬಲ್ಲೀಸರ ಹೊಳೆವುತಲಿ । ಹೊಳೆವುತಲಿ ಏಕಾವಳಿ ಸರವು ॥ ಮಿತ್ರೆ ನೀನಿಟ್ಟು ಹಸೇಗೇಳೂ ॥ ಶೋಭಾನೆ ॥ ೬ ॥ ಶಶಿಮುಖಿಯುರ ಹೊಸ ಮುದ್ದುಮುಖಕೆ । ಹೊಸಮುತ್ತಿನ ಮೂಗುತಿ ಹೊಳೆಯೆ ॥ ಕುಶಲ ವೈಢೂರ್ಯ ಹದಸ್ಯದನು । ಹದಸ್ಯದನು ವಜ್ರದ ಬೊಟ್ಟು ॥ ಮಿತ್ರೆ ನೀನಿಟ್ಟು ಹಸೇಗೇಳೂ ॥ ಶೋಭಾನೆ ॥ ೭ ॥ ಸುರಗಿ ಸಂಪಿಗೆ ಶ್ಯಾಮಂತಿಗೆಯು । ಘಮಘಮಿಸುವ ಮಲ್ಲಮಲ್ಲಿಗೆಯ ॥ ಗೆರೆಯ ಕೇದಗೆಯ ಮುಡಿವಾಲ್ಯ । ಮುಡಿವಾಲ್ಯದವನು ಪಚ್ಚೆಯ ತೆನೆ ॥ ಮಿತ್ರೆ ನೀನಿಟ್ಟು ಹಸೇಗೇಳೂ ॥ ಶೋಭಾನೆ ॥ ೮ ॥ ಶ್ರೀಃ ॥

॥ ೨೪ ॥ ರಾಗ, ಕಾಂಬೋಧಿ [ಧಾಟಿ - ಎನ್ನಪಾಲಿಸಯ್ಯಾ । ಘನಶ್ರೀನಿವಾಸ] ಏಕತಾಳ

ಹಸೆಗೀಗ ಬಾರೋ । ರಾಮಕೃಷ್ಣನೆ ॥ ಪ ॥ ದಶರಥಪುತ್ರ । ಪಶುಪತಿ ಮಿತ್ರ ॥ ವಸುಧೆಯಾಳಿದವನೆ । ವೈಯ್ಯಾರದಿಂದಲಿ ॥ ೧ ॥ ನಂದಕುಮಾರನೆ, ನವನೀತಚೋರನೆ ॥ ಮಂದರೋದ್ಧಾರನೇ । ಮಾನುನೀಯುರಸನೇ ॥ ೨ ॥ ಶೇಷಾದ್ರಿವಾಸನೇ । ಶ್ರೀವೆಂಕಟೇಶನೆ ॥ ಪನ್ನಗಶಯನನೆ । ಘನಶ್ರೀನಿ ವಾಸನೇ ॥ ೩ ॥ ಶ್ರೀ ॥

॥ ೨೫ ॥ ರಾಗ ರೇಗುಪ್ತಿ [ಧಾಟಿ:—ಮಾತು ಮಾತಿಗೆ ಕೇಶವಾ] ತ್ರಿವುಡೆತಾಳ

ಮನದಿಷ್ಟಾರ್ಥಗಳನೀವಾ । ಸಜ್ಜನರು ಸ । ತ್ಕಥೆಯು ಕೇಳಿ ವಿನೋದವಾ ॥ ವನರುಹನಾಭ ಶ್ರೀರಾಮ ಸಂತೋಷದಿ । ಮುನಿಪ ಕೌಶಿಕನ ಯಜ್ಞವನು ಪೂರೈಸುತ್ತಾ ॥ ಮುಂದನುಸರಿಸಿ ರಘುನಾಥ ಮಿಥುಳಾ । ಜನಕ ರಾಜೇಂದ್ರನ ಕುಮಾರಿಯು । ಘನ ಸ್ವಯಂವರಗೈದು ರುದ್ರನ । ಧನು ಮುರಿಯು ಲಾಕ್ಷಣದಿ ವಲ್ಲಭೆ ॥ ನೆನುತಲಿ ಶ್ರೀರಮೆಯುನೊಡಗೂಡೀ ॥ ಶೋಭಾನೇ ॥ ॥ ೧ ॥ ಸೋಮಾರ್ಕಾಮಿತ ಸುತೇಜಾ । ವಿಭ್ರಾಜಿತ । ರಾಮಾದಿ ರಾಜ ರಾಜಾ ॥ ಸಾಮಜವರದ ನೀನೇಳು ನುತಿವೆವು ಸಹಜ । ವ್ಯೋಮಕೇಶಾದಿ ನಿರ್ಜರ ನಿಕರಾರ್ಚಿತ ॥ ಕಾಮಪಿತ ಕಮಲಾಕ್ಷ ಸದ್ಗುಣ । ಧಾಮ ಭಕ್ತ ಸುಪ್ರೇಮ ದುರಿತವಿ । ರಾಮ ಖಳಕುಲಭೀಮ ಮುನಿಜನ । ಸ್ತೋಮನುತ ಎಮ್ಮಾಳುವನೆ ಶ್ರೀ ॥ ರಮೆಯೊಡಗೂಡೀ ಹಸೆಗೀಗ ॥ ಶೋಭಾನೇ ॥ ೨ ॥ ಸರಸದಿ ಪೂಮಾಲೆಯು । ಶ್ರೀರಾಮನ । ಕೊರಳಿಗಿಕ್ಕಿದ ರೀಪಿಯು ॥ ಪರಿಯ ಕಾಣುತಲಿ ಸ್ತ್ರೀಯರುಗೂಡಿ ಸೀತೆಯು । ಕರದರುಹಿದರು ಕೇಳ್ಸರಿಯಿಲ್ಲ ನಿನಗವ್ವಾ ॥ ವರನು ನಿನಗಿವತಕ್ಕ ಸೈ ಸೈ । ಭಳಿರೆ ಭಳಿರೆನುತಾಗ ರತ್ನಾ ಭರಣಗಳು ಸಂಗ್ರಹಿಸಿ ದಂಪತಿ । ಇರವು ಸೈ ಸೈ ಎನುತ ಶೇಸೆಯು ॥ ಸು ಸುರಿದಾರತಿಯಾ ಬೆಳಗಿದರೂ ॥ ಶೋಭಾನೆ ॥ ೩ ॥ ನಾರಿಜಾನಕಿ ಏಳಮ್ಮಾ ನಾಚದಿರೀತ । ಕಾರಣಿಕನು ಕಾಣಮ್ಮಾ ॥ ಹಾರೈಸಿ ಯಜ್ಞವ ನಡ ಲೋಸುಗ ಬಂದ । ದಾರಿಯೊಳಹಲ್ಯೆನುದ್ಧಾರ ಗೈದವನೀತ ॥ ಭಾರಿ ದೈತ್ಯ ಸುಬಾಹು ತಾಟಕಿ । ವೀರ ಮಾರೀಚಾದಿ ಖಳರನಂ । ತೂರಿ ಅಂತಕನೂ ಗಟ್ಟಿದ । ಧೀರರಘುರಾಜೇಂದ್ರ ಭೂಪನ ॥ ಎಂಸಿ ಹಸೆಮಣೆಗೇ ಕರೆದರೂ ॥ ಶೋಭಾನೆ ॥ ೪ ॥ ಚಂದಿರವದನೆ ಕೇಳೂ । ನಿನ್ನರಸನ । ತಂದು ಈಕ್ಷಿ ಇನ್ನೇಳೂ ॥ ಒಂದು ರಾವಣನೀಗ ಕಂದುಕಂರನ ಚಾಪ । ನಿಂದೆತ್ತಿ ಝುಡಿ ತಾನೆಂದು ಕೈದುಡುಕಲು ॥ ಮುಂದೆ ಹಿಂದೆನೆ ಧನುವಿನೆಡೆಯೊಳು ಮಂದಮತಿ ಬಿದ್ದುರುಳೆ ಶ್ರೀಗೋ । ವಿಂದನೆಡಗಾಲುಂಗುಟದಿ ಘು । ಮ್ಮೆಂದ ಮೇಲ್ಹಾರಿಸಿದನ್ನೈ ॥ ಈಸೌಂದರ ವಲ್ಲಭನಾನೊಡನೇಳೂ ॥ ಶೋಭಾನೆ ॥ ೫ ಜಡಜದಳಾಕ್ಷನೇಳೂ । ಲಕ್ಷ್ಮಣೆ ನಿನ್ನ । ಮಡದಿಲ್ಮಕ್ಷ್ಮಿಯೆ ನೀ ಕೇಳೂ ॥ ಪೊಡ ಯೊಳಗೆ ಕೀರ್ತಿಪಡುವೆ ಮುಂದಿವಳಿಂದ । ಕಡಲಬಂಧಿಸಿ ದೈತ್ಯ ಪಡೆಯ ಸಂಹರಿಸುತ್ತ ॥ ಧಡಿಗರಾವಣ ಕುಂಭಕರ್ಣರ । ಒಡನೆ ದೇವಾಂತಕ ನರಾ ತಕ । ರೊಡಲಬಡಿದೀ ಲಂಕೆಯೊಡೆತನ । ಕೊಡುವ ಶರಣಗೆ ದೃಢದಿವಳ ಕರ

ಪಿಡಿದು ಬೇಗೇಳೂ ಹಸೆಗೀಗ ॥ ಶೋಭಾನೆ ॥ ೬ ॥ ವರ ಲಗ್ನಸಮಯವೀಗ । ವ್ಯಾಪಿಸುವೆ ನೀ । ನೆರಕದಿಂದೇಳು ಬೇಗ ॥ ಪರಮ ಮೂಲಿಕೆಯು ಪಟ್ಟಣದೀಶ ನರಸಿಂಹ । ಕರುಣಾಳ್ಗಳರಸ ಧಾರೆಯುಮಂಟಪದೊಳಿತ್ತ॥ಭರಿತ ರತ್ನಾಸನದ ಹಸೆಮಣೆ । ಸರಸ ಸಡಗರದಿಂದಲೀರ್ದನು । ಭೂಸುರರ ಶ್ರುತಿಘೋಷದಿ ರಮಾಪತಿ । ಇರವು ಸ್ಯೆ ಸ್ಯೆ ಇದಿರು ಶೇಷೆಯು ॥ ಸುರಿಸುರಿದಾರತಿಯಾ ಬೆಳಗಿದರೂ ॥ ಶೋಭಾನೆ ॥ ೭ ॥

॥ ೨೬ ॥ ರಾಗ, ಮೋಹನ [ಧಾಟಿ – ರಾಮನಾಮವನ್ನು ನುಡಿ ಮನವೆ] ಆದಿತಾಳ

ಶ್ರೀ ರಾಮನೆ ಬಾರೊ ಪೀಠಕೆ । ಮಾರರೂಪನೆ ॥ ಪಲ್ಲ ॥ ಸಾರಸನೇತ್ರೆಯು ಸೇರುತ ಬೇಗನೆ । ಬೀರುತ ಮೋದವ ಚೀರುತಲೀರ್ಪರು ॥ ವೀರಸುರಾರ್ಚಿತ ಸಾರುತಲೋಕವ । ಸೇರಿ-ತೋರಿ-ನೆರೆಸುಖವೀಯಲು ॥ ೧ ॥ ಯಾಗದ ರಕ್ಷಣೆಗಾಗಿಯೆ ಕೌಶಿಕ । ಬೇಗನೆ ನಿನ್ನೊಡನಾಗಲೆ ಕೂಡಲು॥ ಯಾಗವ ರಕ್ಷಿಸಿ ಭೂಗತನಾರಿಯು । ಬಾಗೀ- ನೀಗೀ- ರಾಗವನು ತೋರಿಹನೆ ॥ ೨ ॥ ಶಂಕರ ಕಾರ್ಮುಕ। ಶಂಕಿಸದೆತ್ತುತ । ಬಿಂಕವನೀಗುತ ಪಂಕಜಲೋಚನ॥ ಕಿಂಕರನಾಗಿಹ ಶಂಕರಪಾಲಿತ । ಲಂಕಾ-ತಂಕಾ ಶಂಕರವಂದಿತ ॥ ೩ ॥

॥ ೨೭ ॥ ರಾಗ, ಬೇಹಾ [ಧಾಟಿ – ನೋಡು ನೋಡು ಗೋಪಿ ನಿನ್ನ] ರೂಪಕತಾಳ

ಹಸೆಗೆ ಬಾರೈ ಹರುಷದಿಂದ । ವಸುದೇವಾತ್ಮಜಾ ॥ ಪಲ್ಲ ॥ ಎಸೆವ ಭೂಷಣಗಳ ತೊಟ್ಟು । ಬಿಸಜಲೋಚನಾ ॥ ಅನುಪಲ್ಲ ॥ ಮುದದಿ ಗೋಪಿ ಕಾಂಗನೆಯರು । ಮಧುರಗಾನದಿ ॥ ಪದೆದು ನಿನ್ನ ಕರೆಯುತಿಹರು। ಪದುಮ ನಾಭನೇ ॥ ೧ ॥ ವೇಣುಗಾನಲೋಲ ಲೋಕ । ಶ್ರೇಣಿಪಾಲಕ ॥ ಕ್ಷೋಣಿ ಭಾರ ಹರಣ ಚಕ್ರ । ಪಾಣಿ ಯದುಪತೀ ॥ ೨ ॥ ನಿಗಮವಿನುತ ದಿವ್ಯಚರಿತ। ಸುಗುಣಪೂರಿತ ॥ ಜಗತಿಸೂತ್ರಧರ ನೃಸಿಂಹ । ನಗವರೋದ್ಧರ ॥ ೩ ॥

॥ ೨೮ ॥ ರಾಗ, ಕರಹರಪ್ರಿಯ [ಧಾಟಿ.– ಹಸೆಗೇನೇ ಕರೆದರು] ಆದಿತಾಳ

ಹಸೆಗೇಳೈ ಬೇಗನೆ ॥ ಪಲ್ಲ ॥ ಬಿಸಜದಳಾಂಬಕ ಬೇಸರಿಸದೆ ॥ ಅ. ಪ. ॥ ತೊಳಗುವ ಫಣೆಯೊಳು । ತಿಲಕವ ರಚಿಸುತೆ ॥ ಸುಲಲಿತ ಭೂಷಣ । ಗಳ ತಳೆಯುತೆ ॥ ೧ ॥ ಅಂಗಜ ಜನಕನೆ । ಮಂಗಳಗಾತ್ರನೆ ॥ ಅಂಗನೆವೆರಸುತೆ । ಕಂಗೊಳಿಸುತ ॥ ೨ ॥ ದೀನಜನಾಮರ । ಧೇನುವೆ ಬೇಡುವೆ ॥ ದಾನವ ವೈರಿಯೇ । ಜಾನಕಿವರ ॥ ೩ ॥ ರಾಮನೆ ರಿಪುಜನ । ಭೀಮನೆ ರಘುಕುಲ ॥ ಸೋಮನೆ ದಶರಥ । ಪ್ರೇಮತನುಜ ॥ ೪ ॥ ಭಾಸುರ ಶ್ರೀಪುರಾ । ವಾಸ ವಿಹಾರನೆ । ವಾಸವ ವಿನುತನೆ । ಭೂಸುರಪತಿ ॥ ೫ ॥

॥ ೨೯ ॥ ರಾಗ ಜಂಜೋಟಿ [ಧಾಟಿ:- ನೋಡು ನೋಡು] ರೂಪಕತಾಳ

ಮುದವಾಂತು ಬಾರೊ ಹಸೆಗೆ ಬೇಗ । ಸದಯ ರಾಘವಾ ॥ ಪಲ್ಲ ॥ ರಾಮ ಸುಗುಣಧಾಮ ಸಂ । ಗ್ರಾಮ ಸಮಯ ಭೀಮ ಶುಭ ॥ ರಾಮ ವಿನುತ । ಕಾಮದಪರ । ಕಾಮಧೇನುವೇ ॥ ೧ ॥ ಅಂಗನಾ ಜನಂಗಳ । ಪೊಂಗಿ ಮುದಂ ಕರೆಯುವರು ॥ ತುಂಗದಯಾ ಪಾಂಗನೆ ರಘುಪುಂಗವ ನೀ ಬಾ ॥ ೨ ॥ ಸುರುಚಿರ ಪೀತಾಂಬರಮಂ । ವರ ಮಣಿಮಯ ಭೂಷಣಮಂ ॥ ಧರಿಸಿ ಲೀಲೆವೆರಸಿ ನಮ । ಸ್ಕರಿಸಿ ನೀ ಬಾರೈ ॥ ೩ ॥ ವರಮುನಿ ಹೃದಯಾಲಯಾ । ಪರಮ ವಿಭವ ಚಾಲದಯಾ ॥ ಭರಿತ ವಿಮಲ ಚರಿತ ನೃಹರಿ । ತ್ವರಿತದಿಂದಲಿ ॥ ೪ ॥

॥ ೩೦ ॥ ರಾ. [ಧಾಟಿ — ನೋಡು ನೋಡು ಗೋಪಿ ನಿನ್ನ] ತಾಳ

ಹಸೆಗೆ ಕರತಾರೆಲೊ ಸುಂದರಾಂಗನಾ ॥ ಪಲ್ಲ ॥ ಇಂದುವದನೇಯರೆಲ್ಲ ಕೂಡಿ ಬೇಗನೆ ॥ ಅ ಪ ॥ ಹಿಂದೆ ತುಚ್ಛ ಸೋಮಕನ । ಕೊಂದ ಮತ್ಸ್ಯನ॥ ಮಂದರಗಿರಿಯ ಬೆನ್ನೊಳ್ । ಪೊತ್ತ ಕೂರ್ಮನಾ ॥ ೧ ॥ ಧಾರುಣಿಯ ದೈತ್ಯರುಗಳ । ಶಿರವನಳಿದನಾ ॥ ಕಂದನಾ ನುಡಿ ಕೇಳಿ ಬಂದ । ನಾರ ಸಿಂಹನಾ ॥ ೨ ॥ ಬಲಿಯ ದಾನ ಬೇಡಿದಂಥಾ । ನೆಗೆವ ರೂಪನಾ ॥ ಛಲದಿ ತಾಯಿ ಶಿರವನಳಿದ । ಪರಶುರಾಮನಾ ॥ ೩ ॥ ವಾರುಧಿಯ ಕಟ್ಟಿದಂಥ । ಜಾನಕಿರಮಣನಾ ॥ ಗೋಪಿಕೇಯ ಬಾಲನಾದ । ಗೋಪಾಲಕೃಷ್ಣನ ॥ ॥ ೪ ॥ ಬತ್ತಲೆಯ ನಿಂತಿರ್ದ । ಬೌದ್ಧರೂಪನಾ ॥ ಉತ್ತಮ ಹಯುವನೇರ್ದ । ಕಲ್ಕ್ಯರೂಪನಾ ॥ ೫ ॥

॥ ೩೧ ॥ ರಾಗ, ಶಂಕರಾಭರಣ [ಧಾಟಿ:- ಹಸೆಗೇನೇ ಕರೆದರು] ಆದಿತಾಳ

ಹಸೆಗೇಳೈ ಸುಂದರಾ । ಅಂಬುಧಿಮಂದಿರಾ ॥ ಪ ॥ ಬಿಸಜದಳಾಂಬಕ । ಶಶಧರಮುಖ ॥ ಅನು ॥ ಕಾಮಜನಕನತ । ಕಾಮಿತವರದ ಶ್ರೀ । ಭಾಮಿನಿ ಪ್ರಿಯ ಗುಣ । ಧಾಮ ಮುದದಿ ॥ ೧ ॥ ಪೀತಾಂಬರಧರ । ಪೂತಗುಣಾಕರ ॥ ಪಾತಕಹರ ಸುರ । ನಾಥವಿನುತ ॥ ೨ ॥ ದೇವಕೋಟಿಗಳೆಲ್ಲ । ಸೇವಿಸೆ ನಿನ್ನನು ॥ ಭಾವಿಸಿ ಕಾದಿಹ । ರೀ ವಿಧದೊಳು ॥ ೩ ॥ ಸುರಪುರ ವಾದ್ಯಗ । ಳುರೆ ಮೊಳಗುತಲಿವೆ ॥ ಸಿರಿಯೊಡನೀಗಳೆ । ವರವಿಭವದಿ ॥೪॥ ಕೀರವಾಣಿಯರಿಂದು । ಚಾರುರಾಗಂಗಳಿಂ ॥ ಸಾರಿ ಕರೆಯುವರು । ನಾರಸಿಂಹನೇ ॥ ೫ ॥

॥ ೩೨ ॥ ರಾಗ, [ಧಾಟಿ:– ಕಂಬುಕಂಧರಿ ಕಮಲನಾಭನ] ಅಷ್ಟತಾಳ

ವರ ಗಣೇಶನ ಶಾರದಾಂಬೆಯು । ಚರಣಕಮಲಕೆ ಎರಗಿ ಬೇಡುವೆ ॥ ಧರೆಯೊಳುತ್ತಮವಾದ ಜನಕನ।ಮಗಳು ಸೀತೆಯು ಹಸೆಗೆ ಕರೆವ ॥ ಪದವನು ಕೇಳಿ ಜನರೆಲ್ಲ ॥ ಶೋ ॥ ಪಲ್ಲ ॥ ಎಣ್ಣೆ ಗಂಟಿನ ಮೇಲೆ ಮಲ್ಲಿಗೆ । ಸಣ್ಣಸಂಪಿಗೆ ಎಸಳು ಕೇದಗೆ ॥ ಕಣ್ಣು ಕೋರೈಸುತಲೆ ನಿಜಕೆಂ । ಬಣ್ಣಿಸಲಳವೆ ರಾಮರ ॥ ಕನ್ನೆ ಜಾನಕಿಯೇ ಹಸೇಗೇಳೂ ॥ ಶೋಭಾನೆ ॥ ೧ ॥ ಬಾಚಿ ಬೈತಲೆ ಹಣಿದ ತುರುಬಿಗೆ । ಜಾತಿ ಮುತ್ತಿನ ಚಿರುನ ಬಾವುಲಿ ॥ ಮಾತು ಕೋಗಿಲೆಯಂತೆ ಸ್ವರಗಳು । ಭೂತಳಾಧಿಪ ರಾಮಚಂದ್ರನ ॥ ಪ್ರೀತಿಯು ಜಾನಕಿಯೇ ಹಸೇ ಗೇಳೂ ॥ ಶೋಭಾನೆ ॥ ೨ ॥ ಕಂಧರದಿ ಕಾಂತಿಯಿಂದೊಪ್ಪುವ । ಅಂದದಾ ಸರ ಹಾರಪದಕವು ॥ ಚಂದಮುತ್ತಿನ ದಂಡೆ ಮಲಕು । ಕುಂದಣದ ಅಡ್ಡಿಗೆಯು ಹೊಳೆಯುತ ॥ ಚಂದಿರೆ ಜಾನಕಿಯೇ ಹಸೇಗೇಳೂ ॥ ಶೋ ಭಾನೆ ॥ ೩ ॥ ಗಜದ ಸೊಂಡಿಲ ಪೋಲ್ವ ತೋಳಿಗೆ । ಭುಜದಿ ಕೀರ್ತಿಯು ತೋಳಬಳೆಗಳು ॥ ಸುಜಗ ಗಿಣಿಯು ಜರದ ಕಂಚುಕ । ನೋಜಿಗದಿ ಅಲಂಕರಿಸಿ ಸೀತೆಯು ॥ ಗಜಗಮನೆಯರೂ ಕರೆದರೂ ॥ ಶೋಭಾನೇ ॥ ಬಡನಡೂ ಬಳಕುತಲಿ ಸೀತೆಯು।ನಡುವಿನೊಳಗುಟ್ಟಿರುವ ಪಟ್ಟೆಯು॥ಬೆಡಗು ರಾಜಿಸುತಿರುವ ಚೆಲುವಿಕೆ । ನಡುವಿನೋಡ್ಯಾಣವನು ಧರಿಸಿದ ॥ ಬೆಡಗಿನ ಜಾನಕಿಯೇ ಹಸೇಗೇಳೂ ॥ ಶೋಭಾನೆ ॥ ೫ ॥ ಎಳೆಯುಮಾವಿನ ತಳಿರ ಪೋಲುವ।ಚರಣದಂದುಗೆ ಗೆಜ್ಜೆಸರಪಣಿ॥ ಬೆರಳಿಗುಂಗುರ ಪಿಲ್ಲಿ ಮಿಂಚನೆ। ಧರಿಸಿ ಮೇಲ್ ನಡೆನಡೆವ ಸೀತೆಯು ॥ ವರ ಮುತ್ತಿನ ಹಸೆಗೆ ಕರೆದರೂ ॥ ॥ ಶೋಭಾನೆ ॥ ೬ ॥

॥ ೩೩ ॥ ರಾಗ [ಧಾಟಿ — ಲಗ್ನಾಲಾ ಜಾತೋ ಮಿ ದ್ವಾರಕಾಪುರ] ತಾಳ

ಮುದವನಾಂತು ಪದುಮ ಪೀಠಕೆ । ಪದವಿಡೈ ಹರೀ ॥ ಪಲ್ಲ ॥ ಉದಧಿ ಜಾತೆ ಸಹಿತ ಮಂಟಪ । ಕಧಿಕ ಹರುಷದೀ ॥ ಅ. ಪ. ॥ ರತ್ನ ಮಂಟಪ ವಜ್ರವಲ್ಲರಿ । ಸುತ್ತ ಮಾಣಿಕದಾ ॥ ಜ್ಯೋತಿಯಿಂದಲಂಕೃತ ಮಾಗಿಹ । ಮುತ್ತಿನಾ ಹಸೆಗೇ ॥ ೧ ॥ ಭೂಸುರಾಗ್ರಣಿಯರೆಲ್ಲ । ಲೇಸು ಬಯಸುತಾ ॥ ಶೇಷೆವಿಡಿದು ಹರಸುತೀರ್ವರು । ವಾಸುದೇವ ನೀ ॥ ೨ ॥ ವೀಣಾಗಾನ ನರ್ತನಾದಿ । ವೇಣುಗಾನದೀ ॥ ಪನ್ನಗ ಗಂಧರ್ವಗೀತದಿ । ಬಣ್ಣಿಸುವರೈ ॥ ೩ ॥ ರಾಮ ಬಾರೈ ಸೋಮಸುಂದರ । ರಮೆಯು ಸಹಿತಲೀ ॥ ಸಾಮಗಾನ ಲೋಲ ಮಾಂಗಿರಿ । ಧಾಮಪ್ರೇಮದೀ ॥ ೪ ॥

೩೪ ॥ ನಾಗ ನಾಯಕಿ [ಧಾಟಿ--ಬಾರೆಊ ಹಸೆಗೆ ಈಗ । ಸುಂದರಾಂಗನೆ] ತ್ರಿವುಡೆತಾಳ

ಬಾರೆ ದಾಕ್ಷಾಯಿನಿ । ತೋರುವ ಹಸೆಗೀಗ ॥ ಪಲ್ಲ ॥ ನೀರಜಮುಖಿ ಸುರ । ವಾರ ಮಧ್ಯದಿ ಬೇಗ ॥ ಅ ಪ. ॥ ಹೊಗಳುತಲಿರುವರು ನಿಗಮ ಸಾರಕರೆಲ್ಲ ॥ ನಗುತ ನಗುತ ಬಾರೆ । ಸೊಗಯಿಪ ಹಸೆಗೀಗ ॥ ೧ ॥ ಮಣಿ ಭೂಷಣವ ತೊಟ್ಟು । ಫಣೆಗೆ ಕುಂಕುಮವಿಟ್ಟು । ಮಣಿವರ ಸಲಹುವ । ಗುಣನಿಧಿ ಹಸೆಗೀಗ ॥ ೩ ಚರಣ ಪಲ್ಲವದೊಳು । ಮೆರೆವನೂಪುರವಿಟ್ಟು ॥ ಗರಪುರ ಮಂದಿರೆ । ಸರಸಿಜ ಮುಖಿ ಗೌರಿ ॥ ೩ ॥

೩೫ ॥ ರಾಗ, ಸಾವೇರಿ [ಧಾಟಿ – ರಂಗನ ಪರಿಣಯ ಐದನೆ ದಿವಸದಿ] ಅಷ್ಟತಾಳ

ಪಿಲ್ಲಿ ಮಂಟಿಕೆ ಯೆಸೆಮೆಟ್ಟು ಕಾಲುಂಗುರ । ವಲ್ಲೆ ಕಿರಿವೆರಳ ಪಿಲ್ಲಿ । ಕರಪಣಿ ಗೆಜ್ಜೆ । ಯಲ್ಲೆ ಓಲೆಯುವಿಟ್ಟಲ್ಲಿ । ಪಾದಗಗಳ । ನಲ್ಲೆ ಸೇವಿಸು ಸನ್ನಲ್ಲಿ । ಓಡ್ಯಾಣದಲ್ಲೀ ॥ ಘಲ್ಲು ಘಲ್ಲನೆ ಕಿರಿಯ ಘಂಟೆಗ । ಳೆಲ್ಲ ಧ್ವನಿ ಯೊಳು ಹಸ್ತಲಾಘವ । ನಲ್ಲೆಯರು ಕೊಟ್ಟಲ್ಲಿ ಮೆಲ್ಲನೆ । ಸುಲ್ಲಸದಿ ಜಾನಕಿಯ ನಾರೆಂ ॥ ದೆಲ್ಲರು ಹಸೆಗೆ ಕರೇದರೂ ॥ ಶೋಭಾನೆ ॥ ೧ ॥ ಬೆರಳ ಮುದ್ರಿಕೆಯು ಕಂಕಣ ಚಳಕಿಗೆ ಬಳೆ । ಮರಕತ ವಲಯುವನೂ । ಹಿಂಬಳೆಗಳ । ಧರಿಸಿ ನಾಪುರಂಗಳನೂ । ತಾತಿಯ ಮಣಿ । ವೆರಸಿ ಭುಜಕೀರ್ತಿಯನೂ । ಆಶ್ರಿತ ವನೂ ॥ ಗರೆದ ಶತಯಷ್ಟಿಯನು ಗೋಸ್ತನ । ವೆರಸಿ ವರ ಉಡುಮಾಲಿ ನವಮಣಿ । ಬೆರಕೆ ಮರಕತ ಪದಕ ಕಂಠಿಯ । ಸರದ ಸಿಂಗರ ಹಸ್ತಗಟ್ಟನು ॥ ನರಿಸಿ ಸೀತೆಯನೂ ಕರೆದರೂ ॥ ಶೋಭಾನೆ ॥ ೨ ॥ ಕುಲಿಶದೋಲೆಯು ಕರಪಣಿ ಜುಮುಕಿಯು ಮುತ್ತ । ನುಲಿದ ಯಸಳ್ಗಳಿಟ್ಟೂ । ಬುಗುಡಿ ಯೆಡೆ । ಕೊಳೆವ ಬಾವುಲಿಯನಿಟ್ಟೂ । ರವಿಶಶಿ ಮಧ್ಯ । ನಿಲಿಸಿ ಮೌಕ್ತಿಕದ ಬೊಟ್ಟೂ । ಮೂಗುತಿಯನಿಟ್ಟೂ ॥ ಸಳನಳಿಪ ಫಣಿವೇಣಿಯೊಳು ಸರ । ಗೊಳಿಸಿ ರಾಗಟೆ ನಾಗಸಂಪಿಗೆ । ಚೆಲುವ ಕೇದಗೆ ಗರಿಯು ಶಾವಂತೆಲರು ಗೊಂಡೆಯ ಪೂವ್ವ ನಲಂಕರ ॥ ಗೊಳಿಸಿ ಜಾನಕಿಯ ಕರೆದರೂ ॥ ಶೋಭಾನೆ ॥ ೩ ॥ ಉಡಿಸಿ ಪವ್ಯಾಂಬರ ಕಂಚುಕಿಯನು ಮೇಲೆ । ತೊಡಿಸ್ಯರಿಸಿನವನಿಟ್ಟು । ಲೋಲಾ ಕ್ಷಿಗೆ । ಮಡದಿರಂಜನವನಿಟ್ಟೂ । ಕಸ್ತುರಿಯ ಚ । ಲ್ವಡೆದ ತಿಲಕವನಿಟ್ಟೂ । ಶೀಳ್ಯವ ಕೊಟ್ಟು । ಇಡುತ ಪಾವುಗೆ ಛತ್ರವನು ಮೇ । ಲ್ಪೊಡಗಿ ಚಾಮರ ಕೊಡವುತಲಿ ಕೈ । ಪಿಡಿದು ಕಡುಬೆಡಗಿಯರು ಮೆಲ್ಲನೆ । ನಡೆಸಿ ಹಸೆಯೊಳ ಗಿರಿಸಿದರು ಸಿರಿ ॥ ವಡೆದ ಜಾನಕಿಯಾ ನೊಲವಿಂದ ॥ ಶೋಭಾನೆ ॥ ೪ ॥ ಸುರಗಿ ಶಾವಂತಿಗೆ ಮರುಗಮಲ್ಲಿಗೆ ಜಾಜಿ । ಮರಕತ ತೆನೆಸಂಪಿಗೇ ।

ಕೇದಗೆಗಂ। ಸುರಹೊನ್ನೆ ಫಣಿಸಂಪಿಗೆ। ಮಂದಾರದ। ಅರಲಸರವ ಮುಡಿಗೆ। ಶೃಂಗಾರವೆಸಗೆ॥ ತರುಣಿಯರು ಮಲಯಜದ ಗಂಧವ। ನೊರಸಿ ಜಾನಕಿ ಸೀತೆ ಜನಕಜೆ। ಧರಣಿಸುತೆ ವೈದೇಹಿ ರಾಘವ।ನರಸಿ ದಶರಥ ಕೌಸಲೆಗೆ ವಧು॥ ವರರ್ಧಸೆಯೂ ತಳೆದರೂ ॥ ಶೋ ॥ ೫ ॥ ಕಿತ್ತಳೆ ನಾರಂಗ ನಾಂಕೇಳ್ಗೆಂಬೀರ ದೊತ್ತಿಲಿ ದಾಡಿಮವು। ದ್ರಾಕ್ಷೆಯ ಪಣ್ಣೆ। ನೊತ್ತಿಲೆ ಅಂಜೂರವೂ। ಕದಳೀ ಫಲ। ದೊತ್ತಿಲಿ ಮಾದಳವೂ। ಹಲಸು ಫಲವೂ ॥ ಮುತ್ತುಕೆತ್ತಿದ ಸ್ವರ್ಣತಟ್ಟೆ ಯೊ। ಳೊತ್ತಿ ಇರಿಸಿದ ನಾರಿಯರು ಕರ। ವೆತ್ತಿ ಉಡಿಯೊಳಗಿರಿಸಿ ಪೇಳ್ಪವ। ನಿತ್ತು ಅಕ್ಷತೆಯಿಟ್ಟು ಪೆಣ್ಗಳು॥ ಮುತ್ತು ಜಾನಕಿಯಾ ಹರಸೀರೆ ॥ಶೋ॥ ೬ ॥ ಕರಿಫಣಿಶಂಖ ವರಹ ಮೀನು ಮೇಘಾಬ್ಧಿ। ವರ ವೇಣು ಕಮರದಲೀ। ಪುಟ್ಟದ ಮುತ್ತು। ಇರುವವೀ ನವಗಳಲ್ಲೀ। ಶೇಷಯುನಿಡು। ವರೆ ಸುವಾಸಿನಿಯರಲ್ಲಿ। ನೆರವುತಲ್ಲೀ ॥ ಎರಡು ಕರದೊಳು ಪಿಡಿದು ತೊಡೆ ಪೆಗ। ಲೊರಿಸಿ ಉರುಮಸ್ತಕದಿ ತಳೆಯುತ। ಹರಸಿದರು ರಘುವರನು ಜಾನಕಿ। ಸ್ಥಿರದೊಳವನಿಯನಾಳಿರೆನುತಲಿ॥ ತರುಣಿರನ್ನೆಯರೂ ಮುದದಿಂದಾ॥ ಶೋ॥ ॥೭॥ಮರಕತ ನೀಲಕುಲಿಶ ಪುಷ್ಯರಾಗವು। ಕುರುವಿಂದ ಹವಳಗಳಾ। ವೈಢೂರ್ಯವ। ನೊಂಸಿ ಸುಸ್ಫಟಿಕಗಳಾ। ಗೋಮೇಧಿಕ। ವೆರಸಿ ನವರತ್ನಗಳಾ ಮುತ್ತಿವರೊಳಾ ॥ ಗರೆದು ಶೇಷೆಯ ಮುತ್ತುರತ್ನದ। ಸರದಿ ಧರಿಸಿ ತುರಾಯಿ ಮಾಲಿಯೊ। ಳಿರಿಸಿ ಜಾನಕಿ ರಾಘವನು ಚಂ। ತರದೊಳಿರಲೆಂದೆಲ್ಲ ಹರಕೆಯ| ಗರೆದಾರೂ ಆರ್ಯಜನರೆಲ್ಲ ॥ ಶೋ ॥ ೮ ॥ ಸರಸಿಜ ಮೇರು ಸ್ವಸ್ತಿಕ ಪದ್ಮರಾಗದ। ಬೆರಕೆ ಆರತಿಗಳನೂ। ರಚಿಸಿ ಘೃತ। ವೆರದು ಪ್ರಜ್ವಲಿಸ್ಯವನೂ ನಾರಿಯರೆಲ್ಲ। ಕರದೊಳಗಾಂತವನು। ಮಂಗಳವನ್ನು ॥ ದೊರೆವುತಷ್ಟೈಶ್ವರ್ಯ ಪುತ್ರರು। ತರುಣಿಯರು ಬಾಂಧವರು ಮಿತ್ರರು। ತರಳರಳಿಯರು ಹೆಚ್ಚಿ ಸಂಪ। ತ್ಕರದೊಳಿಹುದೆಂದೆಲ್ಲ ಹರಕೆಯ।ಗರೆದರಾ ವಧೂವರರಿಂಗೆ॥ ೯।

॥ ೩೬ ॥ ರಾಗ [ಧಾಟಿ.- ಮುದವಾಂತು ಬಾರೊ ಬೇಗ ಹಸೆಗೆ] ರೂಪಕತಾಳ

ಸಖಿ ಬಾರೆ ಬಾರೆ ಬಾರೆ ಹಸೆಗೆ ಸಾರಸನೇತ್ರೆ ॥ ಪಲ್ಲ ॥ ನಲ್ಲೆಯರೀ ಮಲ್ಲಿಗೆಯ। ಬಳ್ಳಿಯ ಮುಗುಳೆಲ್ಲವನೂ ॥ ಬಿಡದೆ ಬಿಡಿಸಿ ಮುಡಿಗೆ ಮುಡಿಸಿ ಸಡಗರದಿಂ ಬಾ ॥ ೧ ॥ ಕಾಂತಾಮಣಿ ಲೋಲೆ ಬಾ। ಸಂತಸದಿ ಪೊಗೋಣಾ ॥ ಇಂತು ಸಭೆಯೊಳಿಂದು ಬರುವ। ಶಾಂತಮುಖಿಯೆ ಬಾ ॥ ೨ ಸಂಗೀತ ಲೋಲೆ ಬಾ। ಭೃಂಗ ಸದೃಶಕುಂತಳೆ ಬಾ ॥ ಅಂಗಜಂಗ ರಂಗಸದೃಶ। ರಂಗಿಣಿಯೇ ಬಾ ॥ ೩ ॥

॥ ೩೭ ॥ ರಾಗ, ಮಧ್ಯಮಾವತಿ [ಧಾಟಿ:- ವನದಲ್ಲಿ ಕೊಳಲನೂದುವನ್ಯಾರೆ] ಅಷ್ಟತಾಳ

ಬಾರೈ ಮುರಾರಿ ನೀ । ಕರೆವರು ಹಸೆಗೆ ॥ ಕರೆವರು ಹಸೆಗೆ । ಮೆರೆವ ಮಂಟಪಕೆ ॥ ಪಲ್ಲ ॥ ನಂದಕಿಶೋರಾ । ನವನೀತ ಚೋರಾ ॥ ಮಂದರ ಧರ ಹರಿ । ಇಂದಿರೆ ಸಹಿತಾ । ೧ ॥ ಸುರ ನರ ವಂದಿತ । ನರಹರಿರೂಪಾ । ಶರಣರ ಪೊರೆಯುವ । ಕರುಣಿ ಪ್ರತಾಪಾ ॥ ೨ ॥ ಮಂಗಳ ಮಹಿಮ ಶ್ರೀ ॥ ರಂಗನೆ ಬಾರೈ ॥ ಅಂಗನೆ ಪದುಮೆಯು । ಭೃಂಗನೆ ಹಸೆಗೆ ॥ ೩ ॥

॥ ೩೮ ॥ ರಾಗ, ಮಧ್ಯಮಾವತಿ [ಧಾಟಿ - ವನದಲ್ಲಿ ಕೊಳಲನೂದುವನ್ಯಾರೆ] ಅಷ್ಟತಾಳ

ನಮಿಪೆವು ರಘುವರ । ಬಾ ದೇವ ಹಸೆಗೆ ॥ ಬಾ ದೇವ ಹಸೆಗೆ । ಮೆರೆವ ಮಂಟಪಕೆ ॥ ೧ ॥ ನಿಗಮ ಗೋಚರನೇ । ರಘುಕುಲಸೋಮನೆ ॥ ಬಗೆ ಬಗೆಯುಲಿ ನಿನ್ನ । ನಗಧರ ನಮಿಪೆ ॥ ೨ ॥ ಕರುಣಾಕರ ಶ್ರೀ । ಶರಣರಪೊರೆವಾ ॥ ಚರಣನಂಬಿದೆವಯ್ಯಾ । ತರುಣಿಸೀತೆಯುಸಹಾ ೩ ಶ್ರೀ ।

॥ ೩೯ ॥ ರಾಗ, ಕಾಂಬೋಧಿ [ಧಾಟಿ:- ಚಿತ್ತಜನ್ಮಯ್ಯ ಶ್ರೀಚಿತ್ರ] ಏಕತಾಳ

ವರ ಮಹಾಲಕ್ಷ್ಮಿ ವಿಲಾಸನೆ ಜಯ ಜಯ । ನಿರುತ ಸುಧಾಬ್ಧಿಯ ವಾಸನೆ ಜಯ ಜಯ ॥ ಸುರಮುನಿ ಮಾನಸ ಹಂಸನೆ ಜಯ ಜಯ । ದುರಿತ ನಿಕರವಿಧ್ವಂಸನೆ ಜಯ ಜಯ ॥ ಪರಮ ಪುರುಷನೇ ಹಸೇಗೇಳೂ ॥ ಶೋಭಾನೇ ॥ ೧ ॥ ಅನುಪಮ ಸದ್ಗುಣ ಸಾಂದ್ರಪರಾಕೂ । ಇನಕುಲ ವಾರಿಧಿ ಚಂದ್ರಪರಾಕೂ । ವಿನುತನುತಾ ಜನರಕ್ಷ ಪರಾಕೂ । ದನುಜಾ ಧಮಕುಲಶಿಕ್ಷ ಪರಾಕೂ ॥ ವಿನಯದಿ ರಾಮನೇ ಹಸೇಗೇಳೂ ॥ ಶೋಭಾನೆ ॥ ॥ ೨ ॥ ಕುಶಿಕಸುತಾಧ್ವರಪಾಲನೆ ಧೀರಾ । ಶಶಿಮುಖಿ ಅಹಲ್ಯಾ ಶಾಪ ಮುದಾರಾ ॥ ದಶರಥ ತನುಜ ಜನಕಜಾವಾತಾ । ಪಶುಪತಿ ಚಾಪವಿನಾಶ ವಿಖ್ಯಾತಾ ॥ ದಶಕಂಠ ವೈರೀ ಹಸೇಗೇಳೂ ॥ ಶೋಭಾನೇ ॥ ೩ ॥

॥ ೪೦ ॥ ರಾಗ, ಕಾಂಬೋಧಿ [ಧಾಟಿ.- ಎನ್ನ ಪಾಲಿಸಯ್ಯಾ । ಘನ್ನ ಶ್ರೀನಿವಾಸ] ಏಕತಾಳ

ಸಾರಸಾಕ್ಷಿ ಬಾ ಬಾ । ಬಾರೆ ಬೇಗ ಹಸೆಗೆ ॥ ಪಲ್ಲ ॥ ಭೇರಿತಮಟೆ ತಾಳ । ಭಾರಿವಾದ್ಯಗಳು । ಭೋರ್ಗರೆಯುತಿರಲು । ನೀರೆ ನಿನ್ನ ಕಾಣಲ್ ॥ ೧ ॥ ಭಾವಜನ ರಾಣಿ । ಭಾರ್ಗವೀ ಕಲ್ಯಾಣಿ ॥ ದೇವದೇವನ ರಾಣಿ । ಶ್ರೀಮತೀ ಪದ್ಮಿನೀ ॥ ೨ । ಕ್ಷೀರವರಜಾತೆ । ಮಾರವೈರಿ ವಿನುತೆ ॥ ವಾರಿಜಾಸನ ಮಾತೆ । ಸಾರಿ ಬಾ ಪ್ರಖ್ಯಾತೆ ॥ ೩ ॥ ಶ್ರೀವೃಷಶೈಲ ನಿಲಯೆ । ವಾಸವಾದ್ರಿಗೇಯೆ ॥ ವಾಸುದೇವ ಜಾಯೆ । ವಸುಮತಿ ತನಯೆ ॥ ೪ ॥

॥ ೪೧ ॥ ರಾಗ [ಧಾಟಿ:- ನಂದಗೋಕುಲದೊಳಗೆ । ಅಡುವ] ತಾಳ

ಅಗಲಿರುವರೆ ಮನವೇ । ಶ್ರೀ ರಾಮಾ । ಅಗಲಿರುವರೆ ಮನವೇ ಅಗಲಿರುವರೆ ಮನ । ಅಗಣಿತ ಮಹಿಮಗೆ । ಜಗವ ಉದ್ಧರಿಸಿದ । ಜಾನಕಿ ರಮಣಗೆ ॥ ಮೃಗನೇತ್ರೆಯರು ಹಸೆಗೇ ಕರೆದರು ॥ ಶೋಭಾನೆ ॥ ೧ ದಶರಥನುದರದಲೀ । ಶ್ರೀ ರಾಮಾ । ಶಿಶುವಾಗಿಯೆ ಜನಿಸೀ ॥ ವಸುಧೆಯ ಭಾರವನಿಳುಹಬೇಕೆನುತಲಿ । ಕುಶಲದಿಂದಲಿ ಬಂದ ದಶರಥ ರಾಮಗೆ ಶಶಿಮುಖಿಯರು ಹಸೆಗೇ ಕರೆದರು ॥ ಶೋಭಾನೆ ॥ ೨ ॥ ಬಾಲಕವೇ[ಷ] ದಲೀ । ಶ್ರೀ ರಾಮಾ । ಲೀಲೆಯ ತೋರುತಲೀ ॥ ಮೂರು ಲೋಕದಿ ತ[ನ್ನ] ಮಹಿಮೆಯ ಪೊಗಳಿಸಿ । ಲೋಲನಾಗಿ ಬಂದ ಕೋದಂಡ ರಾಮಗೇ ಲೋಲಾಕ್ಷಿಯರು ಹಸೆಗೇ ಕರೆದರು ॥ ಶೋಭಾನೇ ॥ ೩ ॥ ಮಾಧ್ಯಾಹ್ನಿಕ[ವ] ಮಾಡಿ । ಶ್ರೀ ರಾಮಾ । ಮಡಿಗಳ ನೆರಿದುಟ್ಟು ॥ ವಜ್ರ ಮಾಣಿಕದ ಮಂಟ[ಪ] ಮಧ್ಯದಿ । ಪ್ರಜ್ವಲಿಸುವ ಮುದ್ದು ಪದ್ಮನಾಭನಿಗೆ ॥ ವ್ರಜೆಯರು ಹಸೆ[ಗೆ] ಕರೆದರು ॥ ಶೋಭಾನೇ ॥ ೪ ॥ ಬಟ್ಟುಕಂಕಣವನಿಟ್ಟು । ಶ್ರೀ ರಾಮಾ ಇಟ್ಟ ಕಸ್ತೂರಿತಿಲಕ । ಅಷ್ಟಾಂಗ ಲೋಲೆನಿಪ ಶಿಷ್ಟಪ್ರಮಾಣದಿ । ಪಟ್ಟಾ[ಭಿ] ರಾಮನ ಪರಮ ಕಲ್ಯಾಣಿಗೆ ॥ ಅತಿಯಿಂದ್ಹಸೆಗೆಕರೆದರು ॥ ಶೋಭಾನೆ ॥ ೫

॥ ೪೨ ॥ [ಧಾಟಿ - ಸಂತತಂ ಸುಖವಂಕಳಾದೇವೀ]

ಸಂತತಂ ಶ್ರೀಕೃಷ್ಣ ಹಸೆಗೇಳೈ । ಅತಿಬೇಗದಿಂದಲಿ ॥ ಪಲ್ಲ ॥ ಶ್ರೀ[ನಿ] ವಾಸನೆ ಗಾನಲೋಲನೆ ಜಾನಕೀರಮಣಾ ಸು । ಜ್ಞಾನ ಪೂರ್ಣಾನಂದಾ[ಂ] ಭೋಜನ । ಮಾನುನಿಯರಭಿಮಾನ ಕ್ಯಾದಾ ॥ ೧ ॥ ಬ್ರಹ್ಮದೇವನ ನಿರ್ಮಿಸಿ ಬ್ರಹ್ಮಾಂಡ ಕಟ್ಟೇಸೀ ಪರ ॥ ಬ್ರಹ್ಮನೇ ಪೊರೆಯುವವನೇ । ಧರ್ಮಕಮ[ಲ] ಪ್ರೇಮದಿಂದಲಿ ॥ ೨ ॥ ಶ್ರೀಕರಾ ಕರುಣಾಕರಾ । ನಿರ್ಮಲಾ ಕೃಪಾಕರಾ ಶೋಕಹರಾ ಕಲಾಧರಾ । ಸುಮಂಗಳಾ ಗಾತ್ರನೇ ॥ ೩ ॥

॥ ೪೩ ॥ ರಾಗ, ಬೇಹಾಗ್ [ಧಾಟಿ - ಅರವಶಾನಾದುದಾ ಭಂಗಾರ] ರೂಪಕತಾ[ಳ]

ಸುಂದರಾಂಗ ಬಾರೊ ಹಸೆಗೆ ಇಂದಿರೇಶನೇ । ಇಂದುಮುಖಿ ಲಕ್ಷ್ಮಿ ಸಹಿತ ಚಂದದಿಂದಲೀ ॥ ಪಲ್ಲ ॥ ನೀಲ ಮೇಘಶ್ಯಾಮ ನಿನ್ನ ಲೋಲ ಸೊ[ಬ] ಗದಿ । ಚಲುವೆ ರುಕ್ಮಿಣಿ ದೇವಿಗೊಲಿದ ಫಾಲತಿಲಕದಿ ॥ ೧ ॥ ಕರಕೆ ಕಂಕ[ಣ] ಶಿರಕೆ ಮಕುಟ ಧರಿಸಿ ಬೇಗದೀ । ಪುರದಿ ಸಕಲರೆಲ್ಲ ನಿಮ್ಮ ಚರಿತೆ ಪೊ[ಗ] ಳುತಾ ॥ ೨ ॥ ಕಡಗೋಲನ್ನು ಕರದಿ ಪಿಡಿದು ಉಡುಪಿಯೊಳ್ ನಿಂತನೆ ಬಿಡದೆ ನಮ್ಮ ರಕ್ಷಿಸುವ ಒಡೆಯ ಕೃಷ್ಣನೆ ॥ ೩ ॥

॥ ೪೪ ॥ ರಾಗ, ಸಾವೇರಿ [ಧಾಟಿ:- ರಂಗನ ಪರಿಣಯ । ಐದನೆ ದಿವಸದಿ] ಆದಿತಾಳ

ಭೂಮಿಭಾರವ ತಾನು ಪ್ರೇಮದಿ ಕಳೆಯಲು । ತಾಮರಸಾಂಬಕನು । ಬೇಗದಿ ತಾನು । ಸೋಮಸನ್ನಿಭ ಮುಖನು । ಯೋಚಿಸುತಾಗ । ಕಾಮಿತ ದಾಯಕನು । ಪೇಳುವದೇನು ॥ ಕಾಮಿನೀಮಣಿ ದೇವಕಿಯಳು । ದ್ವಾಮ ಗರ್ಭದಿ ಜನಿಸಿ ಬೆಳೆಯುತ । ಲಾಮಹಾಪೂತನಿಯನಳಿಸಿದ । ಕಾಮಪಿತ ನನು ಪರಸಿಪಾಡುತ ॥ ಕೋಮಲಾಂಗಿಯರು ಕರೆದರು ॥ ಶೋಭಾನೆ ॥ ೧ ॥ ಪುಂಡರೀಕಾಕ್ಷನು ತೊಟ್ಟಿಲೊಳಿರುತಿರೆ । ಭಂಡಿಕನೈತರಲು । ಕಾಣುತ ಲಾಗ। ಭಂಡನ ಹರಿಯೊದೆಯಲು । ಪುಡಿಯಾಗಿ ಭೂ । ಮಂಡಲದೊಳು ಬೀಳಲು । ಕಾಣುತ್ತ ಸಭದೊಳು ॥ ತಂಡತಂಡದಿ ಮೆರೆಯುತಿರುವಾ । ಖಂಡಲಾದಿಮ ಸುರರು ಪೂಮಳೆ । ದುಂಡುಮಲ್ಲಿಗೆ ಹಾಸಿಗೆಯಿದೆನೆ । ಮಂಡಲಕೆ ಸುರಿಸುತ್ತ ನುತಿಸಿದ ॥ ಚಂಡವಿಕ್ರಮನ ಕರೆದರು ॥ ಶೋಭಾನೆ ॥ ॥ ೨ ॥ ಕಣ್ಣಮುಚ್ಚಾಟವ ಮಿಣ್ಣನಾಡುತಲಿರಲು । ಬಣ್ಣಗುಂದುತ ಹರಿಯು । ಗೆಳೆಯರ ಕೂಡಿ । ತಣ್ಣಗೆ ನತಸಿರಿಯು । ಲೀಲೆಗಳಿಂ । ಸನ್ನುತನಹ ಧೊರೆ ಯು । ಆಡುತ್ತಲಿರಲು ॥ ಮಣ್ಣ ನುಂಗಿದನೆಂದು ತನ್ನಯ । ಅಣ್ಣ ರಾಮನು ಜನನಿಗರುಹಲು । ತನ್ನ ಮಾತೆಗೆ ಬಾಯ ತೆರೆಯುತ । ಉನ್ನತದ ಲೋಕ ಗಳ ತೋರಿದ ॥ ಚನ್ನಕೇಶವನ ಕರೆದರು ॥ ಶೋಭಾನೆ ॥ ೩ ॥ ಕೂಡುತ ಗೋಪರ ನಾಡುತಲಿರಲಾಗ । ಕೇಡುಗ ಬಕನೆಂಬನು । ಬರಲು ತಾನು । ನೋಡುತಲಾತನನು । ಕರದೊಳಗಾಂತು । ಗಾಢನೆ ಶ್ರೀಕಾಂತನು । ಬಲು ಕಪಟಯನ್ನು ॥ ನಾಡೆ ಸೀಳುತಲವನ ಪ್ರಾಣವ । ಕಾಡಪಾಲೆಸಗುತ್ತ ಲುರಿಯನು । ನೋಡಿ ಭೀತಿಯಬಿಟ್ಟು ನುಂಗಿದ । ರೂಢಿಗೊಡೆಯನ ಪಾಡಿ ಪರಸುತ॥ ಗಾಡಿಗಾತಿಯರು ಕರೆದರು ॥ ಶೋಭಾನೆ॥ ೪ ॥ ಗೋಪಿಯರೆಲ್ಲರು ಜಲಕೇಳಿಗೈವಾಗ । ತಾಪಸಾರ್ಚಿತನೊಲಿದು । ಸೀರೆಗಳನ್ನು । ತಾ ಪೊತ್ತು ಮರವನೇರ್ದು ॥ ಮುರಲಿಯ ಪಿಡಿದು । ಶ್ರೀಪನು ಧನಿಯ ಗೈದು ॥ ಮೆರೆ ಯುವದನರಿಂದು ॥ ರೂಪುದೋರದೆ ಗೊಲ್ಲ ಸತಿಯರು । ವೈಪರೀತ್ಯದಿ ಬೇಡೆ ಕರುಣ । ಕೂಪನೊಯ್ಯುತಲವರ ವಸ್ತ್ರವ । ಚಾಪಲಾಕ್ಷಿಯರ್ಗೊಲಿದ ಯದುಕುಲ ॥ ದೀಪನ ಹಸೆಗೆ ಕರೆದರು ॥ ಶೋಭಾನೆ ॥ ೫ ॥ ಸಾನುರಾಗದಿ ಮನೆಮನೆಗಳ ನುಗ್ಗುತ । ತಾನು ಬೆಣ್ಣೆಯ ಪಾಲನು । ಮೆಲ್ಲನೆ ಕುಡಿದ । ಮಾನಿನಿಯರ ಶರಗನು । ಪಿಡಿದು ಬಲು । ಮಾನವಳಿಸುತವರನು । ನತ

ಸುರಧೇನು ॥ ಏನನರಿಯದ ಶಿಶುಗಳಂದದಿ । ಭಾನುಕೋಟಿ ಪ್ರಭನು ಲೀಲೆಯು । ಗಾನರಸ ಮೊದಲಾಗಿ ನಟಿಸುತ । ಮೀನಕೇತನ ಕಲಹವೆಸಗಿದ । ಮಾನನಿಧಿಯನು ಕರೆದರು ॥ ಶೋಭಾನೆ ॥ ೬ ॥ ಕಾಳಿಯ ಸರ್ಪನ ಗರ್ವವನಡಗಿಸಿ । ಮೇಲಾತನರಸಿಯರ । ಮಾಂಗಲ್ಯವ । ಪಾಲಿಸಿ ಸರಸಿಯರ । ಗೋಪ್ಯಳ ಕೂಡಿ । ಲೀಲೆ ಗೈವುತ ಮಾವರ । ನತಜನಕೆ ಶುಭಕರ ॥ ನೀಲವೇಣಿಯುಳಾದ ಗೋಪಿಯು । ಅಲ್ಲಿಗಾನಂದವನು ಪಡಿಸುತ । ಮೇಲೆ ಗೋವರ್ಧನವನೆತ್ತಿದ । ಬಾಲಕೃಷ್ಣನ ಪಾಲಿತಾರ್ಥನ ॥ ಬಾಲೆಯರು ಹಸೆಗೆ ಕರೆದರು ॥ ಶೋಭಾನೆ ॥ ೭ ॥ ಬಿಲ್ಲಹಬ್ಬಕೆ ಪೋಗಿ ದಾರಿಯೊಳಕ್ರೂರ । ಗಲ್ಲಿ ನಿಜವ ತೋರುತ । ಸುಧಾಮನ । ಮೆಲ್ಲನೆ ಮನ್ನಿಸುತ । ಕುಬ್ಜೆಯ ಕಾಯ । ವೆಲ್ಲವ ಸರಿಗೈಯ್ಯುತ । ಬಲರಾಮ ಸಹಿತ ॥ ಖುಲ್ಲರಜಕನ ಕೊಂದು ಕಂಸನ । ಬಿಲ್ಲಮುರಿಯುತ ದಾರಿಗಟ್ಟಿದ । ಮಲ್ಲರೆಲ್ಲರ ಭುಲ್ಲವಿಸುತ । ಲ್ಲಿಲ್ಲ ವೆನಿಸಿದ ಫುಲ್ಲನಾಭನ ॥ ನಲ್ಲೆಯರು ಹಸೆಗೆ ಕರೆದರು ॥ ಶೋಭಾನೆ ॥ ೮ ॥ ಮಾವ ಕಂಸನ ಪೀಠವೇರಿರಲವನಾಗ । ಭಾವಿಸದಾ ಹರಿಯು । ದುಸ್ಸರ್ಗದಿ ಯಾಡಿ । ಪಾವನಸಹ ಘೋರೆಯು । ಗರ್ಜಿಸುತಾಗ । ತೀವಿಕೊಂಡಿಹ ಬರಿಯ । ಗರ್ವವನಾಂತು ॥ ಪ್ರೊಪ್ರೊ ಗೋಪರ ಬಾಲ ಬಂದೆಯ । ಸಾವುದೊರೆದುದು ನಿನಗೆ ನೋಡೆನು । ತಾ ವಿವೇಕವಿಹೀನ ಕಂಸನು । ಮಾವರನ ಕೆಣಕುತಿರೆ ನೋಡಿದ । ಪಾವನಾತ್ಮಕನ ಕರೆದರು ॥ ಶೋಭಾನೆ ॥ ೯ ॥ ನೀತಿಬಾಹಿರ ಕಂಸನನು ಕೊಂದು ನಲಿಯಲು । ಪೂತ ಶ್ರೀಹರಿಯಾಗಲು । ಪೂಮಳೆ ಗಳು । ಪ್ರೀತಿಯಿಂದಲಿ ಸುರಿಯಲು । ದುಂದುಭಿರವಗ । ಳೋತು ಭೋರೆನುತಿರಲು । ಸಂತಸದೊಳಾ ಪುರು ॥ ಹೂತ ಮುಖ್ಯರು ಜಯ ಜಯ ಧ್ವನಿ । ಗೀತೆ ಮೇರೆಯುದಪ್ಪಿ ಮೆರೆಯಲು । ಮಾತೆ ಜನಕರ ಮುಖ್ಯ ಬಂಧು । ವ್ರಾತವನು ಪಾಲಿಸಿದ ಹರಿಯನು ॥ ಕಾತರಾಕ್ಷಿಯರು ಕರೆದರು ॥ ಶೋಭಾನೆ ॥ ೧೦ ॥ ಮಂಗಳ ಯದುಕುಲ । ಪುಂಗವನಿಗೆ ಜಯ । ಮಂಗಳ ಮಾಧವಗೆ । ದೀನರ ಬಲು । ಸಂಗದಿ ಮೆರೆಯುವಗೆ । ವಿಹಗೇಂದ್ರ ತು । ರಂಗಗೆ ರಂಗನಿಗೆ । ಪತಂಗಭಾಸಗೆ ॥ ಅಂಗಜನ ತಾತನಿಗೆ ಕರುಣಾ । ಪಾಂಗೆಯರು ಪಾಲಿತ ಮಹೇಂದ್ರಗೆ । ಭಂಗರಹಿತಗೆ ಭಾಗ್ಯದಾತಗೆ । ಅಂಗನಾಜನ ಸ್ಮರಗೆ ಸತಿಯರು । ಮಂಗಳಾರತಿಯ ಬೆಳಗಿದರು ॥ ಶೋಭಾನೆ ॥ ೧೧ ॥ ಶ್ರೀ ॥

॥ ೪೫ ॥ ರಾಗ ಬಿಲಹರಿ [ಧಾಟಿ:- ಕರುಣಾಕರ ನೀನೆಂಬುವದ್ಯಾಕೋ] ಆದಿತಾಳ

ಮಂದ ಗಮನದಿಂದ ಜಾನಕಿ ನೀ ಬಾ । ಸುಂದರ ಹಸೆಗೀಗಾ ॥ ಪಲ್ಲ ॥ ಅಣಿವೇಣಿಯೆ ಕಲವಾಣಿಯೆ ನಿರುಪಮ । ಅಳಕವಿರಾಜಿತೆ ಜಲಜದಳಾಕ್ಷೀ ॥ ನಳನನಾಭನ ಮನೋನಾಯಕಿ ಸುಲಲಿತೆ । ನೀಲದ ಹಸೆಗೀಗಾ ನೀ ಬೇಗಾ ॥ ೧ ॥ ಅಂಬುಜಾತೆ ಕಮಲಾಂಬಕಿ ಹಿಮಕರ । ಬಿಂಬ ಸದೃಶ ಮುಖಿ ಅಂಬುಜಗಾತ್ರೇ ॥ ಕಂಬುಕಂಧರಿ ಕ್ಷೀರಾಂಬುಧಿ ಸಂಭವೆ । ಅಂಬುಜದ ಹಸೆಗೇ ನೀ ಬೇಗಾ ॥ ೨ ॥ ಅಂಗನಾಮಣಿ ಪನ್ನಂಗವೇಣಿಯೇ ಬಾ । ಶೃಂಗಾರಾಂಬುಧಿ ಭೃಂಗಕುಂತಳೆಯೇ ॥ ಮಾಂಗಿರಿ ಶೃಂಗೋತ್ತುಂಗ ನಿವಾಸಿನಿ । ರಂಗುಮಾಣಿಕದ್ಹಸೆಗೇ ನೀ ಬೇಗಾ ॥ ೩ ॥

॥ ೪೬ ॥ ರಾಗ, ಮಧ್ಯಮಾವತಿ [ಧಾಟಿ - ಏಳೂ ಸದ್ಗುಣಧಾಮ ಹಸೆಗೀಗ] ಏಕತಾಳ

ಶ್ರೀ ರಾಮಾ ಘನಶ್ಯಾಮಾ ಕೋಮಲಕಾಯಾ । ಶ್ರೀ ಮನೋಹರ ರೂಪ ಕಾಮಿತವೀವಾ ॥ ಭೀಮಬಲಾಧಿಕ ಸಾಹಸವಂತನೆ । ಆ ಮಹಾಹರ ಧನು ಖಂಡಿಸಿದವನೆ ॥ ಭೂಮಿಜೆ ಸೀತೆಯು ನಿನ್ನ ಕಾದಿರುವಳು । ಪ್ರೇಮದಿ ವರಿಸು ನೀ ತಾಮರಸಾಕ್ಷನೆ ॥ ನೀ ದಯಮಾಡೂ ಹಸೆಗೇಳೂ ॥ ಶೋಭಾನೇ ॥ ೧ ॥ ಮಲ್ಲಿಗೆ ಹೂವನೆ ಮೆಲ್ಲನುಮುಡಿಸುತಾ । ಒಳ್ಳೇ ಪರಿಮಳಗಂಧ ಪುನುಗು ಪೂಸಿಸುತಾ ॥ ಗಲ್ಲ ಕಪಾಲವು ಥಳಥಳಿಸುತಲಿ । ಮೆಲ್ಲನೆ ನೀಕ್ಷಿಸಿ ಹೆಜ್ಜೆಯಿಡುತಲಿ ॥ ಫುಲ್ಲನಾಭ ಶ್ರೀರಾಮನ ಪಾದದ । ಪಲ್ಲವದೆಡೆಯೊಳು ಸುಲ್ಲಲಿತಾಂಗಿಯು ॥ ಮೆಲ್ಲ ಬಾಗುತಲೀ ನಮಿಸಿದಳೂ ॥ ಶೋಭಾನೆ ॥ ೨ ॥ ಶ್ರೀ ಲಕ್ಷ್ಮಿ ಅವತಾರಿ ಜಾನಕಿದೇವಿ । ಶೀಲ ಸೌಭಾಗ್ಯದ ಮೂಲರೂಪಿಣಿಯು ॥ ಜಾಲ ಸುರರ ಪರಿವಾರವ ಜನನಿ । ಮಾಲೆಯು ಹಾಕು ಶ್ರೀರಾಮಗೆ ತರುಣಿ ॥ ಪಾಲಿಸು ನಮ್ಮೆಲ್ಲರ ನೀ ಕರುಣಿ । ಲೀಲೆಯು ತೋರ್ದ ಶ್ರೀರಾಮಗೆ ಸೀತೆಗೆ ॥ ನಲ್ಲೆಯರಾರತಿಯಾ ಬೆಳಗಿದರು ಶೋ ॥ ೩ ॥ ವಾದ್ಯ ನಿನಾದ ಭೇರಿಯು ರಭಸದಲಿ । ಮೋದಿನಿ ವಿಭುದರಾ ಮಂತ್ರ ಘೋಷದಲಿ ॥ ಗಾಧಿಜ ವಿಶ್ವಾಮಿತ್ರನ ಒಲುಮೆಯನು । ಆದಿಲಿ ಪಡೆಯುತ ಪಿತನಪ್ಪಣೆಯನು ॥ ಆದಿಕೇಶವ ಶ್ರೀರಾಮನು ವರಿಸಿದ । ಶ್ರೀನಿಧಿಯಾಗಿಹ ಸೀತಾದೇವಿಗೆ ॥ ಆ ದಿನದಾರತಿಯಾ ಬೆಳಗಿದರೂ ॥ ಶೋಭಾನೆ ॥ ೪ ॥ ಆದಿ ಶ್ರೀವಿಷ್ಣು ಲಕ್ಷ್ಮಿಯರೂ ನೀವಾಗಿ । ಈ ದಿನಾ ರಾಮ ಸೀತೆಯ ರೂಪಾಗುತಲೀ ॥ ಬಾಧಕ ದುರ್ಜನರನ್ನು ಶಿಕ್ಷಿಸುತಾ । ಸಾಧುಜನರ ಪರಿಪಾಲನ ಮಾಡುತತ್ತ । ರಾಧಿಸುವವರಿಗೆ ಸಾಧನಮುಕ್ತಿಯು । ಮೋದದಿಂದ ಸೌಭಾಗ್ಯವನ್ನಿತ್ತು ॥ ಆದರದಿಂ ಕಾಯೋ ರಮಾಧವ ಗೋಪಾಲಾ ॥ ಶೋಭಾನೆ ॥ ೫ ॥ ಶ್ರೀ ॥

## ಆರತೀ ಹಾಡುಗಳು.

॥ ೪೭ ॥ ರಾಗ, [ಧಾಟಿ - ನಂದನಂದನ ಶ್ರೀಮುಕುಂದ ಮಾಧವಗೆ] ತಾಳ

ಈಶಸುತಗೆ ನೆನಗಡಲೆ ಕಬ್ಬುಯೊಳ್ಳುಂಡೆ। ರಾಶಿ ಮೋದಕಕೊಡಿಸಿ ॥ ಶಾರದೆಯನು। ಏಕಚಿತ್ತದಿ ಸ್ಮರಿಸಿ ॥ ಶ್ರೀರಾಮರ । ಕೀರ್ತನೆಯನು ಸೃಜಿಸಿ ॥ ಕಾಂತೆಯರೆಲ್ಲ ಶೋಭಾನೆಯ ಪಾಡುತ್ತ । ನೂತನಮಯದೆಸಳಾರತಿಗಳ ತಂದು ॥ ಸೀತಾರಾಮರಿಗೆ ಬೆಳಗೀರೆ ॥ ಶೋಭಾನೆ ॥ ೧ ॥ ದಶರಥನುದರದಿ ಜನಿಸಿ ವಿಶ್ವಾಮಿತ್ರ । ಋಷಿಯ ಯಾಗಕೆ ಪೋಗಿ ॥ ಆ ವನದಿ ತಾ। ಟಕಿಯ ಸಂಹಾರಮಾಡಿ । ಅಹಲ್ಯೆಯ । ಪಥವಿ ಬಿದ್ದಿರೆ ನೋಡಿ ॥ ಸತಿಯ ಶಾಪವ ಚರಣದಿ ಪರಿಹರಿಸಲು । ಮಿಥುಳಪುರದಲಿ ಸಹಸದಿ ಬಿಲ್ಲೆತ್ತಿದ ॥ ನಿಪುಣ ಗಾರತಿಯ ಬೆಳಗೀರೆ ॥ ಶೋಭಾನೆ ॥ ೨ ॥ ಇಂದುವದನೆ ಸಹಾ ಬಂದು ಅಯೋಧ್ಯದಿ। ಚಂದಗಿಂದಿರುತಿರಲು। ಮಾತೆಯ ವಾಕ್ಯದಿಂದ ವನಕೆ ಸೇರಲು। ಚರಿಸುತ್ತಾ । ಗಂಗಾನದಿಯ ದಾಟಲು ॥ ಮುಂದೆ ಭಾರದ್ವಾಜ ಋುಷಿಯಾಶ್ರಮದಲಿ । ಇಂದುವದನೆ ಸಹ ಇದ್ದ ಶ್ರೀರಾಮಗೆ ॥ ಕುಂದಣದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ । ದಂಡಕಾನನದೊಳು ಅಂಡಲಿದಸುರೆಯ । ಖಂಡಿಸಿ ಕಿವಿಮೂಗ । ಖರದೂಷಣರ । ಕೊಂದು ಯುದ್ಧದೊಳಾಗ । ಕಬಂಧನ । ಕೊಂದು ಮೃಗವ ಬೇಗ ॥ ಕೊಂಡು ಬರುವೆನೆಂದು ಮೃಗವ ಬೆನ್ನಟ್ಟಲು । ಇಂದುವದನೆಯ ಕಾಣದೆ ಭ್ರಮಿಸಿದ ರಾಮ ॥ ಚಂದ್ರಗಾರತಿಯ ಬೆಳಗೀರೆ ॥ ಶೋಭಾನೆ ॥ ೪ । ತಾಳೆಯ ತರುವನು ಮುರಿದು ದುಂದುಭಿಯನು । ಕಾಲಿನಿಂದಲೆ ಚಿಗಿದು । ಮೇಲಪ್ಹಾರಿಸಿ । ವಾಲಿಯ ಬೇಗ ಗೆಲಿದು ॥ ಸುಗ್ರೀವಗೆ । ಪಾಲಿಸಿ ರಾಜ್ಯವಿತ್ತು ॥ ಶೀಲೆ ಸೀತೆಯ ನೋಡಿ ಬಾರೆಂದು ಹನುಮಂತ। ನೋಳ್ ಶ್ರೀಮುದ್ರಿಕೆಇತ್ತ ಸೀತಾರಾಮಗೆ ಲಲನೆಯರಾರತಿಯ ಬೆಳಗೀರೆ ಶೋಭಾನೆ ॥ ೫ ॥ ಕರಡಿ ಕಪಿವರರನು ನೆರಹಿ ಸಾಗರವನ್ನು । ಹರುಷದಿಂದಲೆ ದಾಟ । ದೈತ್ಯರ ಪಡೆ ಸಂ । ಹಾರವನು ಮಾಡಿ ॥ ರಾವಣನ । ಶಿರವನು ಚಂಡನಾಡಿ ॥ ತರುಣಿ ಸೀತೆಯ ಸಹಿತಯೋಧ್ಯೆಗೆ ನಡೆತಂದು । ಸ್ಥಿರದಿ ಪಟ್ಟವನಾಳ್ದ ರಾಮಗೆ ಸೀತೆಗೆ । ಕುರುಜಿನಾರತಿಯಾ ಬೆಳಗೀರೆ ॥ ಶೋಭಾನೆ ॥ ॥ ೬ ॥ ಈ ಪರಿಯಲಿ ಶ್ರೀರಾಮರ ಚರಿತೆಯ । ನಾ ಪೊಗಳುವೆ ಮುದದಿ । ತಪ್ಪುವಪ್ಪನು । ನೀ ಪಾಲಿಸು ದಯದಿ ॥ ಶ್ರೀರಾಮರ । ಕೀರ್ತನೆಯನು ಶುಭದಿ ॥ ಭೂತಳಕಧಿಕ ಪಿಳ್ಳಸಗಿಯಲಿ ನಿಂತ। ಕೋಟೇಶ್ವರನ ವರ ಕರುಣ ಕಟಾಕ್ಷದಿ ॥ ನೀ ಪಾಲಿಸಿ ಮುನ್ನಾ ಸಲಹೆನ್ನಾ ॥ ಶೋಭಾನೆ ॥ ೭ ॥

॥ ೪೮ ॥ ರಾಗ [ಧಾಟಿ:- ನಂದಗೋಕುಲದೊಳಗೆ । ಅಡುವ] ತಾಳ

ಕ್ಷೀರಸಾಗರ ಶಯನಾ । ಸ್ವಾಮಿ । ಧಾರುಣಿಗತಿಪ್ರಿಯನಾ ॥ ನಾರಿ ರುಗ್ಮಿಣಿ ಮನ ಸೂರೆ ಗೊಂಡವನಿಗೆ । ನಾರಿಯರೆಲ್ಲರು ಶರಧಿ ಗಂಭೀರಗೆ । ವಾರಿಜದಾರತಿಯಾ ಬೆಳಗೀರೆ । ಶೋಭಾನೇ ॥ ೧ ॥ ಜಲದೊಳಗಾಡಿದಗೆ । ಸ್ವಾಮಿ । ಜಾಲ ಕಚ್ಛವತಾರಗೆ ॥ ಗಿರಮ್ಯ್ಯಗಂತಿರಲು ಬೆರೆದ ಬಿಂದಿನ ಪೊಕ್ಕು । ತವಕದಿಂದಸುರನ ಸೀಳ್ದು ಭೂಮಿಯ ತಂದ ॥ ಚಲುವಗಾರತಿಯ ಬೆಳಗೀರೆ ॥ ಶೋಭಾನೆ ॥ ೨ ॥ ಕಂದನ ನುಡಿಯ ಕೇಳಿ । ಸ್ವಾಮಿ । ಖಂಬವ ಒಡೆದು ಬಂದೆ ॥ ಬಂದು ಬಲೀಂದ್ರ ಕೈಯಿಂದ ಭೂಮಿಯ ಬೇಡಿ । ಚಂದದಿಂದಲಿ ಕೊಡಲಿ ಪಿಡಿದ ಶ್ರೀದೇವಗೆ । ಕುಂದಣದಾರತಿಯಾ । ಬೆಳಗೀರೆ ॥ ಶೋಭಾನೆ ॥ ೩ ॥ ಬಾಣ ಬಿಲ್ಲನೆ ಪಿಡಿದು । ಸ್ವಾಮಿ । ಕ್ಷೋಣಿ ಯೊಳವತರಿಸಿದೆ ॥ ಬೆಣ್ಣೆ ಮೊಸರು ಕದ್ದು ಬಾಲಲೀಲೆಯದೋರಿ । ಪಣದ ಸತಿಯರ ಸುವ್ರತವನಗಲಿಸಿದ । ವನಜದಾರತಿಯಾ ಬೆಳಗೀರೆ । ॥ ಶೋಭಾನೆ ॥ ೪ ॥ ಕಲಿಯುಗ ಧರ್ಮದಲಿ । ಸ್ವಾಮಿ । ಕಲ್ಕ್ಯವತಾರದಲಿ ॥ ಜಲಜಲೋಚನ ಸ್ವಾಮಿ ಪಲಕಿ ಕುದುರೆ ಏರಿ । ಲೀಲೆಯಿಂದಲಿ ಮ್ಲೇಂಛ ಕುಲವ ಸಂಹರಿಪಗೆ । ಲಲನೆಯರಾರತಿಯ ಬೆಳಗೀರೆ ॥ ಶೋಭಾನೆ ॥ ೫ ॥

॥ ೪೯ ॥ ರಾಗ, ಸುರಟ [ಧಾಟಿ:- ಆರತಿಯೆತ್ತಿರೆ । ನಾರಿಯರೆಲ್ಲರು] ಆದಿತಾಳ

ಆರತಿಯೆತ್ತಿರೆ । ಸಾರುತಪತ್ತಿರೆ । ಮಾರನಾಕಾರಗೆ । ನೀರಜನೇತ್ರಗೆ ೧॥ ನೀರದ ಕಾಯಗೆ । ನಾರದಗೇಯಗೆ ಶ್ರೀರಮಣೀಶಗೆ । ವಾರಣಪೋಷಗೆ॥೨॥ ಪರಿಹೃತತಾಪಗೆ । ಪರತರರೂಪಗೆ । ವರಫಣಿಶಾಯಿಗೆ । ಪರಗತಿದಾಯಿಗೆ॥೩॥

॥ ೫೦ ॥ ರಾಗ, ಕೇತಾರ [ಧಾಟಿ:- ಆರತಿ ಎತ್ತಿದರೂ । ಶ್ರೀಲೋಲಗೆ] ಏಕತಾಳ

ಅಂಗನೆಯರಾರತಿಯಾ । ಪಾಂಡುರಂಗನಿಗೆತ್ತಿದರು ॥ ಪಲ್ಲ ॥ ಗೋಪಾಲಬಾಲಗೆ । ಭೂಪಾಲ ವಿನುತಗೆ ॥ ಪಾಪವಿಮೋಚನಗೆ । ಶಾಪಹರನಿಗೆ ॥ ಅಂಗನೆಯ ॥ ೧ ॥ ನಂದಾತ್ಮಜನಿಗೆ । ಸುಂದರ ಮೂರುತಿಗೆ ॥ ಮಂದರಧರನಿಗೆ । ಚಂದದಿಂದಲಿ ಬೇಗ ॥ ಅಂಗನೆಯ ॥ ೨ ॥ ಸಂತೋಷ ಭರದಿಂದ । ಸಂತೋಷಕರನಿಗೆ ॥ ಸಂತಾಪಹರನಿಗೆ । ಕಾಂತೆಯ ಸಖನಿಗೆ ॥ ಅಂಗನೆಯ ॥ ॥ ೩ ॥ ತುಂಗವಿಕ್ರಮನಿಗೆ । ಮಂಗಳ ಮೂರುತಿಗೆ ॥ ಅಂಗಜಪಿತನಿಗೆ । ಸಂಗೀತ ಚರಿತಗೆ ॥ ಅಂಗನೆಯ ॥ ೪ ॥ ಮತ್ತಗಾಮಿನಿಯರು । ಮುತ್ತಿನ ಗಳಾರತಿ ॥ ಪ್ರೀತಿಯಿಂದಲಿ ಈಗ । ಉತ್ತಮ ಸೀತೆಗೆ ॥ ಅಂಗನೆಯ ॥ ೫ ॥

॥ ೫೧ ॥ ರಾಗ [ಧಾಟಿ:- ಊಟ ಬೈಸ ಊಟ ಬೈಸ ಯೇತ ಯೆವುನ] ತಾಳ

ಅಂಗನೆಯರು ಶ್ರೀ। ರಂಗನಿಗೆತ್ತಿರೆ ಮಂಗಳಾರತಿ ॥ ಪಲ್ಲ ॥ ಮಂಗಳಾರತಿ । ಎತ್ತಿರೆ ಮಂಗಳಾರತಿ ॥ ಕಾಂಚನ ಮಂಗಳಾರತಿ । ಬೆಳಗಿರೆ ಚಂದದಾರತಿ ॥ ಅನುಪಲ್ಲ ॥ ಮಾರಿವಿಹಾರಿ । ವರಗಿರಿಧಾರಿ । ಚೋರಧರಾರಿ । ವಿದಾರಿ ಹರಿ ॥ ಕ್ರೂರ ಹಿರಣ್ಯಕ । ವೈರಿ ಮುರಾರಿಗೆ ॥ ಮಂಗಳಾರತಿ ॥ ೧ ॥ ಪೊಡವಿಯು ಬೇಡೀ । ಕೊಡಲಿಯೊಳಾಡಿ ॥ ಮಡದಿಯನ್ನೊಯ್ದನ ಮಡುಹಿದಗೆ ॥ ಕಡುಗಲಿ ಕಂಸನ । ಕೆಡಹಿದ ಕೃಷ್ಣಗೆ ॥ ಮಂಗಳಾರತಿ ॥ ೨ ॥ ದೋಷರಹಿತಗೆ ।ಶ್ರೀಶಕಲ್ಕ್ಯಗೆ॥ ವಾಸವನುತ । ನಾರಾಯಣಗೆ॥ ತೋಷದಿ ಮೆರೆವಸು । ವಾಸಿನಿಯರು ಜಯ ॥ ಮಂಗಳಾರತಿ ॥ ೩ ॥

॥ ೫೨ ॥ ರಾಗ, [ಧಾಟಿ - ಆರತಿ ಪಾಡಿರೆ। ಸಾರಸ ನೇತ್ರಗೆ] ತಾಳ

ಆರತಿ ಎತ್ತಿರೆ । ನಾರಿಯರೆಲ್ಲರು ॥ ಮಾರಸುಂದರ ಸುಕುಮಾರ ಶರೀರಗೆ ॥ ಪಲ್ಲ ॥ ಮುಂಗಡೆಯೊಳು ನಿಂದು । ಮಂಗಳವಾಗಲೆಂದು ॥ ಶೃಂಗಾರಶೀಲಗೆ । ಸಂಗೀತಲೋಲಗೆ ॥ ೧ ॥ ಆರಭಿ ಮೋಹನ । ಭೈರವಿ ಶಾಹನ ॥ ಮಾರವಿ ಮೊದಲಾದ । ಚಾರು ರಾಗವ ಪಾಡಿ ॥ ೨ ॥ ವಾರಿಜ ವದನಗೆ । ವಾರಣಗಮನಗೆ । ವೈರಿ ವಿದಾರಿಗೆ । ವೀರ ರಾಘವನಿಗೆ ॥ ೩ ॥ ಸಗುಣ ಸುಚರಿತಗೆ । ಅಗಣಿತ ಮಹಿಮಗೆ ॥ ಜಗವನುದ್ಧರಿಸಿದ । ಖಗರಾಜ ಗಮನಗೆ ॥ ೪ ॥ ಸುಂದರ ಸುಗುಣಗೆ । ವಂದಿತ ಚರಣಗೆ ॥ಅಂಗನೆ ರುಕ್ಮಿಣಿ। ಮಂಗಲ ಭಾಮೆಗೆ ॥ ೫ ॥ ಮಂಗಳ ನಾಮಗೆ । ಹೆಂಗಳ ಪ್ರೇಮಗೆ ॥ ಪುಂಗವರೋತ್ತಮ । ಸುಂದರ ಶ್ಯಾಮಗೆ ॥ ೬ ॥ ನಂದನ ಕಂದಗೆ ।ಇಂದಿರೆ ಯರಸಗೆ ॥ ಸಿಂಧುಶಯನ ಪು । ರಂದರ ವಿಠಲಗೆ ॥ ೭ ॥

॥ ೫೩ ॥ ರಾಗ [ಧಾಟಿ:- ಕೋಕಿಲವಾಣಿಯರೆ । ವರಗುಣಮಣಿಯರೆ] ತಾಳ

ನೀರಜಾಕ್ಷಿಯರೇ । ಆರತಿ ಬೆಳಗಿರೆ ಮಾರ ಜನಕನಿಗೆ ॥ ಪಲ್ಲ ॥ ಸಾರಸಾಕ್ಷಿಯರೇ । ಆರತಿ ಬೆಳಗಿರೆ ಮಾರಜನಕನಿಗೆ ॥ ಅನುಪಲ್ಲ ॥ ರಾಧಾಲೋಲಗೆ। ಮಥುರಾಪುರದರಸದಯುತವದನಗೆ ॥ ಸಾರಸಾಕ್ಷಿಯರೆ। ಆರತಿ ಬೆಳಗಿರೆ ಮಾರಜನಕನಿಗೆ ॥ ೧ ॥ ಗೋಪಿಯರ್ ವಸ್ತ್ರವ। ಅಪಹರಿಸಿದ ಮಧುಸೂದನಗೆ ॥ ಸಾರಸಾಕ್ಷಿಯರೆ । ಆರತಿ ಬೆಳಗಿರೆ ಮಾರಜನಕನಿಗೆ ॥ ೨ ॥ ವಾಸುದೇವಗೆ। ವಸುದೇವನ ಸುತ ಕೃಷ್ಣಭೂಪಗೆ॥ ಸಾರಸಾಕ್ಷಿಯರೆ। ಆರತಿ ಬೆಳಗಿರೆ ಮಾರಜನಕನಿಗೆ ॥ ೩ ॥ ಶ್ರೀ

॥ ೫೪ ॥ ರಾಗ, ಸಾವೇರಿ [ಧಾಟಿ:- ರಂಗನ ಪರಿಣಯ ಐದನೆ ದಿವಸದಿ] ಅಷ್ಟತಾಳ

ಅಂಗಜಪಿತನೆ ಕೇಶವ ನಾರಾಯಣ ಅ। ಭಂಗ ಮಾಧವ ಗೋವಿಂದ। ವಿಷ್ಣುವೆ ಖಗತು।ರಂಗನೆ ಮಧುಸೂದನ॥ ತ್ರಿವಿಕ್ರಮ। ಗಂಗೆಯುಪಿತ ವಾಮನ॥ ರಂಗ ಶ್ರೀಧರನ ॥ ಮಂಗಳಾಂಗ ಹೃಷೀಕೇಶನ । ತುಂಗಬಲ ಪದ್ಮನಾಭ ಗಿರಿಜೆ ಅ। ಥಾರ್ಂಗ ಹರಪ್ರಿಯ ದಾಮೋದರ ಮಾ। ತಂಗವರದ ಸಂಕರ್ಷಣ ಜಯವೆಂದು ॥ ಮಂಗಳಾರತಿಯ ಬೆಳಗೀರೆ । ಶೋಭಾನೆ ॥ ೧ ॥ ವಾಸು ದೇವಾಖ್ಯ ಪ್ರದ್ಯುಮ್ನನೆ ಅನಿರುದ್ಧ । ಶ್ರೀಶಾ ಭೋ ಪುರುಷೋತ್ತಮ ॥ ಅಧೋಕ್ಷಜ।ಶೇಷಶಯನ ನರಸಿಂಹ ॥ ಅಚ್ಯುತ ಇಂದಿ।ರೇಶ ಶ್ರೀಜನಾರ್ದನ ॥ ದೋಷರಹಿತನ ॥ ನಾಶರಹಿತ ಉಪೇಂದ್ರ ಹರಿಯೋ । ನೀ ಸಲಹು ಶ್ರೀಕೃಷ್ಣ ಯೆನ್ನನು।ವಾಸವಾದ್ಯ ಸುಪೂಜ್ಯನಿಗೆ ಸಂ। ತೋಷದಲಿ ಶ್ರೀಕೃಷ್ಣ ರುಕ್ಮಿಣಿಗೆ ॥ ಬಾಸಿಂಗದಾರತಿಯ ಬೆಳಗೀರೆ ॥ ಶೋಭಾನೆ ॥ ೨ ॥ ನಳಿನಲೋಚನ ಬಹು ಬಲವಂತ ಕಂಸನ । ಅಳಿದು ಭೂಭಾರವನು ॥ ಅರೆನಿಮಿಷದೊಳ್ । ಇಳುಹಿದ ಪರಮಾತ್ಮನೂ ॥ ಅಹಿಪತಿಯನು। ತುಳಿದ ಮಹಿಮನು ನೀನೂ॥ ಸಲಹು ಭಕ್ತರನು ॥ ಇಳೆಯೊಳ್ ಕೃಷ್ಣಾನಂದ ನಗರದಿ । ನೆಲಸಿ ಭಕ್ತರ ಸಲಹಿ ಮೆರೆಯುವ ॥ ನಳಿನನಾಭ ಮುಕುಂದ ಮುರಹರ। ಕೊಳಲಪಿಡಿದ ಗೋಪಾಲ ಲಕ್ಷ್ಮಿಯಿಗೆ। ನಳಿನದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೫೫ ॥ ರಾಗ, ಕಲ್ಯಾಣಿ [ಧಾಟಿ.- ಕಾಶಿಪೀತಾಂಬರ ಕೈಯಲ್ಲಿ] ಏಕತಾಳ

ಅಗಣಿತ ರೂಪಳೆ ನಗುಮುಖದವಳೆ। ಹೊಳೆವ ಹಂಸನ ವಾಹನವೇರಿದವಳೇ ॥ ಸುರಮುನಿಗಳೆಲ್ಲ ಕರಗಳ ಮುಗಿದರು । ಪರಮ ಪಾವನೆ ನಿಧಾನೆ ಮೂಕಾಂಬೆಗೆ ॥ ಪದುಮದಾರತಿಯ ಬೆಳಗೀರೆ । ಶೋಭಾನೆ ॥ ೧ ॥ ಚಂದ್ರಗಾವಿಯ ಸೀರೆ ನೆರಿಹೊಳೆಯುತಲಿ । ಇಂದ್ರಮಾಣಿಕ್ಯದಾಭರಣಗಳ್ಹೊಳೆಯೇ ॥ ಚಂದವ ವರ್ಣಿಸಲೆಂದೆನಗಳವೇ। ಮಂದಗಮನೆ ನಿಧಾನೆ ಮೂಕಾಂಬೆಗೆ ॥ ಕುಂದಣದಾರತಿಯ ಬೆಳಗೀರೆ ॥ ಶೋಭಾನೆ ॥ ೨ ॥ ಸುಲಲಿತ ವಾದ್ಯ ಸಂಗೀತ ಸೇವೆಗಳು। ಹಲವು ಬಗೆಯ ತೋರಣದ ಮಂಟಪದಿ ॥ ಬಲ ಎಡದೊಳು ಚಾಮರವ ಬೀಸುವರು। ನಿನಗ್ಯಾರು ಸರಿಯೆ ನಿಧಾನೆ ಮೂಕಾಂಬೆಗೆ ॥ ಜಲಜದಾರತಿಯ ಬೆಳಗಿರೇ ॥ ಶೋಭಾನೆ ॥ ೩ ॥ ಉರಿವ ಹಗಲುಬತ್ತಿ ಬಿರುಸು ಬಾಣಗಳು । ಬಿರುದಾವಳಿ ಪೊಗಳುವ ಪಾಠಕರು ॥ ನುಡಿನುಡಿ

ಗಳಿಗೆ ಅವಧಾನ ಹೇಳುವರು । ನಿನಗ್ಯಾರು ಸರಿಯೆ ನಿಧಾನೇಮೂಕಾಂಬೆಗೆ ॥ ಬಗೆಬಗೆಯಾರತಿಯಾ ಬೆಳಗಿರೆ ॥ ಶೋಭಾನೆ ॥ ೪ ॥ ವರ ಕೋಲ್ಹಾಪುರ ವಾಸೆ ಮೂಕಾಂಬೆ । ಕರುಣದಿ ಪಿಡಿದೆನ್ನ ಸಲಹೆ ಜಗದಾಂಬೆ ॥ ಪರ ಶಿವನಿಗೆ ಪಟ್ಟದರಸಿ ಮೂಕಾಂಬೆ । ವರ ಕೊಲ್ಲೂರಲ್ಲಿ ವಾಸಿಸುವ ಮೂಕಾಂಬೆಗೆ ॥ ಕುರುಜಿನಾರತಿಯಾ ಬೆಳಗೀರೆ ॥ ಶೋಭಾನೆ ॥ ೫ ॥ ಶ್ರೀ

॥ ೫೭ ॥ ರಾಗ, ಅಸಾವೇರಿ [ಧಾಟಿ,- ] ಏಕತಾಳ

ವಸುಧೆಯು ಭಾರವನಿಳುಹುವೆನೆಂದು । ದಶರಥನುದರದಿ ಬಂದು ॥ ಋಷಿಯು ಯಾಗವ ಸಲಹುವೆನೆಂದು । ಕುಶಲದಿಂ ತಾಟಕಿಯು ಕೊಂದು ॥ ಪಿತನ ಪಾದವ ನೆನೆದು । ಸಾಹಸದಿ ಪಶು । ಪತಿಯು ಧನುವ ಮುರಿದು ॥ ಊರಿಗೈತರುವ । ಪಥದಿ ಭಾರ್ಗವನ ಗೆಲಿದು ॥ ಅತಿ ಹರುಷದೊಳಾ ಭರಥಗೆ ತನ್ನಯು । ಎಸೆವ ಪಾದುಕೆ ಇತ್ತ ರಾಮಗೆ ಸೀತೆಗೆ ॥ ರತುನದಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ದಂಡಕವನದೊಳಗ । ಭಂಡೆ ಅಸುರೆ ಕುಚ ಮೂಗ ॥ ಕಂಡು ತಾ ಛೇದಿಸಲು ಬೇಗ । ಬಂದು ಪಂಚವಟಿಯೊಳಾಗ ॥ ಚಂದದಿಂದಿರುತ್ತಿರಲು ॥ ಕಪಟದ ಮೃಗವು । ಮುಂದೆ ಸುಳಿಯುತ ಬರಲು। ತರುವೆನೆಂದಾ। ನಂದದಿಂದಲಿ ಪೋಗಲು ॥ ಭಂಡ ರಾವಣಸೀತೆಯುನಪಹರಿಸಲು । ಕಂಡು ತನ್ನಯು ಮನ ಮರುಗುತಾ। ಅಂದು ಸೀತಾಂಗನೆ ಅರಸುತ್ತಾ॥ ಬಂದು ಜಠಾಯುವ ಕಾಣುತ್ತಾ ॥ ಮುಂದವಗೆ । ಸದ್ಗತಿಯನ್ನು ಮಾಡುತ್ತಾ ॥ ಪಂಪಾತೀರದೊಳ್ಬಂದು ಹನುಮನ ನೋಡುತ್ತಾ ॥ ಚಂದದಿಂದಲಿ ಪೆಗಲೇರುತ ಮತ್ತಾ । ಬಂದು ಕಿಷ್ಕಿಂಧಿಯೊಳ್ನಿಂದ ಶ್ರೀರಾಮಗೆ ॥ ಕುಂದಣದಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ತಾಳೆಯ ತರುಗಳನೇಕ । ಬಾಣದಿಂ ಛೇದಿಸಿ ಮತ್ತಾ ॥ ಕಾಲೊಳು ದುಂದುಭಿಯು ಒಡಲ । ಚಿಗಿದು ಮತ್ತೆಬಿಸಾಡುತ॥ ವಾಲಿಯು ಸದೆದು ಮತ್ತಾ।ಸುಗ್ರೀವನಿಗೆ।ಪಾಲಿಸಿ ರಾಜ್ಯವಿತ್ತಾ । ಹನುಮನೊಡನೆ । ಪೇಳೀ ಆ ಕುರುಹ ಮತ್ತಾ ॥ ನಾರಿ ಜಾನಕಿಯನು ಹುಡುಕಬೇಕೆನುತಲೆ। ವಾನರಗಳನೊಡಗೂಡುತ್ತಾ ॥ ವಾರಿಧಿ ಬಂಧನ ಮಾಡುತ್ತಾ । ಸಾಗರವನ್ನು ದಾಟುತ್ತಾ ॥ ಲಂಕೆಗೆ ಪೋಗಿ । ಖೂಳ ರಾವಣನ ಸೀಳುತ್ತಾ ॥ ವಿಭೀಷಣಗೆ । ಪಾಲಿಸಿ ರಾಜ್ಯವಿತ್ತಾ ॥ ನಾರಿ ಜಾನಕಿ ಸಹಾ ಪುಷ್ಪಕವೇರುತ । ಬಂದು ಅಯೋಧ್ಯೆಯೊಳ್ನಿಂದ ಶ್ರೀರಾಮಗೆ॥ ಚಂದನದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥ ಶ್ರೀ

॥ ೫೭ ॥ ರಾಗ, ಪಂತುವರಾಳಿ [ಧಾಟಿ - ನೋಡು ನೋಡು ಗೋಪಿ ನಿನ್ನ] ಅಷ್ಟತಾಳ

ಆರತಿ ಎತ್ತಿರೆ ವಾರಿಜಮುಖಿ । ಸೀತಾದೇವಿಗೆ ॥ ಪಲ್ಲ ॥ ಹದಿನಾಲ್ಕು ಲೋಕ ಆಳುವಂಥಾ । ರಾಮಚಂದ್ರಗೆ ॥ ಅನುಪಲ್ಲ ॥ ಭೂಮಿನಾಳುವ ರಾಜ ಧೊರೆ । ರಾಮಚಂದ್ರಗೆ ॥ ಭೂಮಿದೇವಿ ಮಗಳು ಸೀತೆ । ವಾರಿಜಾಕ್ಷಿಗೆ ॥ ॥ ೧ ॥ ಹರಡೆ ಕಂಕಣ ಕಮಲದೋಲೆ ಸರಿಗೆ ಸರಗಳಾ । ವಂಕಿನ ಜೋಡು ಇಟ್ಟ ತೋಳಿಗೆ ರನ್ನ ಕುಪ್ಪಸಾ ॥ ೨ ॥ ಗೊಂಡೆ ರಾಕುಟ ಚಂದ್ರಕೇತಕಿ । ಹೆರಳುಭಂಗಾರಾ ॥ ಮರುಗಮಲ್ಲಿಗೆ ಜಾಜಿಸಂಪಿಗೆ । ದವನ ಮುಡಿಸಿದಾ ॥ ೩ ॥

॥ ೫೮ ॥ ರಾಗ, ಪಂತುವರಾಳಿ [ಧಾಟಿ - ನೋಡು ನೋಡು ಗೋಪಿ ನಿನ್ನ] ಅಷ್ಟತಾಳ

ಆರತಿ ಬೆಳಗೀರೆ ನೀವು ಸರಸಿಜಾಕ್ಷಗೆ । ನಾರಿ ರುಕ್ಮಿಣೀ ಸಹಿತ ರಂಗ ನಾಥಗೆ ॥ ಪಲ್ಲ ॥ ಜಲದೊಳಗೆ ಆಡುವಂಥ । ಚೆಲುವ ಮತ್ಸ್ಯಗೇ ॥ ಗಿರಿಯ ಬೆನ್ನೀಲಿ ಪೊತ್ತ । ಕೂರ್ಮರೂಪಗೇ ॥೧॥ ವರಹರೂಪವನ್ನು ತಾಳಿ । ಧರಣಿ ನೆಗೆದಗೆ ॥ ತರಳ ಪ್ರಹ್ಲಾದಗೊಲಿದ ನಾರಸಿಂಹಗೇ ॥೨॥ ಬಲಿಯು ಬಾಗಿಲವ ಕ್ಕಾದ । ಚೆಲುವ ವಟುವಿಗೆ ॥ ಛಲದಿ ತಾಯ ಶಿರವನಳಿದ ಪರಶುರಾಮಗೆ ॥ ॥ ೩ ॥ ಸೇತು ಕಟ್ಟ ಸೀತೆಯನ್ನು । ತಂದ ರಾಮಗೆ ॥ ಗೋಪಾಲಕರ ಕೂಡಿ ಕೊಂಡು । ಬಂದ ಕೃಷ್ಣಗೆ ॥ ೪ ॥ ಬತ್ತಲೆಯು ತಿರುಗುವಂಥ । ಚಲುವ ಬೌದ್ಧಗೆ ॥ ಉತ್ತಮಾಶ್ವವೇರಿಕೊಂಡು । ಮೆರೆವ ಕಲ್ಕ್ಯಗೆ ॥ ೫ ॥

॥ ೫೯ ॥ ರಾಗ, ಸಾವೇರಿ [ಧಾಟಿ - ರಾಜಿಪ ಮಣಿಮಯ ರತ್ನ] ಏಕತಾಳ

ಇಕ್ಷ್ವಾಕುವಂಶವಾರಿಧಿ ಚಂದ್ರಮಗೆ । ರಾಕ್ಷಸಾಂತಕ ರವಿಕೋಟ ತೇಜನಿಗೆ ॥ ಸೌಮಿತ್ರಿ ಭರಥ ಶತ್ರುಘ್ನರಗ್ರಜಗೆ । ಲಕ್ಷಣೆ ಸೀತೆಗೆ ಸುಂದರಾಂ ಗನೆಯರು ॥ ಮುತ್ತಿನಾರತಿಯು ಬೆಳಗೀರೆ ॥ ಶೋಭಾನೆ ॥ ೨ ॥ ಶಶಿಮುಖಿ ಕೌಸಲ್ಯೆ ಶಿಶುವೆನಿಸುವಗೆ । ದಶರಥ ಸುತನಿಗೆ ದಶಮುಖಾಂತಕಗೆ ॥ ಪಶು ಪತಿ ಪ್ರಿಯ ಸಾಹಸಿ ರಾಘವಗೆ । ಬಿಸಜಾಕ್ಷಿ ಸೀತೆಗೆ ಸುಂದರಾಂಗನೆಯರು ॥ ಕುಸುಮದಾರತಿಯು ಬೆಳಗೀರೆ ॥ ಶೋಭಾನೆ ॥ ೨ ॥ ಮೆರೆವ ಸುಕೀರ್ತನ ನಗರಧೀಶ್ವರಗೆ । ಸುಲಲಿತ ಮೂರ್ತ್ಯೆಕ ಭರಣ ಭೂಷಿತಗೆ ॥ ಕರುಣಾಕರ ಕಸ್ತೂರಿ ತಿಲಕಗೆ । ಮೆರೆವ ಶ್ರೀಸೀತೆಗೆ ಸುರವಾಂಗನೆಯರು ॥ ಕುರುಜಿ ನಾರತಿಯು ಬೆಳಗೀರೆ ॥ ಶೋಭಾನೆ ॥ ೩ ॥

|| ೬೦ || [ಧಾಟಿ.- ನಂಬಿದೆ ನಿನ್ನ ಪಾದವಾ । ಶ್ರೀಹರಿ]

ಆರತಿ ಬೆಳಗಿರೆ ನೀ । ಶ್ರೀಹರಿ।ಗಾರತಿ ಬೆಳಗಿರಿ ನೀ ॥ ಪಲ್ಲ ॥ ರಕ್ಕಸ ವೈರಿ ನೀನೆಂದೆನಿಸೀ । ಸೊಕ್ಕಿದ ರಕ್ಕಸರ ಸಂಹರಿಸಿ ॥ ಅಕ್ಕರದಿಂದಲಿ ಭಕ್ತರ ಪೊರೆಯುವ ॥ ೧ ॥ ಮದನಾನಂತಗೆ । ಚೆಲುವಾಂಗನಿಗೆ ॥ ಮದ ಮುಖ ರಾಜರ ಸುತನಿಗೆ ॥ ಸುದತಿಯರೆಲ್ಲರು । ಮುದದಿ ಗೋಪಾಲಗೆ ॥ ॥ ೨ ॥ ತರಳನು ಮೊರೆಯಿಡುವುದನಾಲಿಸಿ । ದುರುಳ ರಕ್ಕಸನ ಸಂಹರಿಸಿ ॥ ತರುಣಿಯರ ಮನ । ಸೂರೆಗೊಂಡವನಿಗೆ ॥ ೩ ॥

॥ ೬೧ ॥ ರಾಗ, ಸುರಟಿ [ಧಾಟಿ:- ನಾಗವೇಣಿ ನಗರಿಗೆ ನಾ] ರೂಪಕತಾಳ

ಇಂದುವದನೆಗಾರತಿಯು । ತಂದು ಬೆಳಗಿರೆ ॥ ಪ ॥ ಸರಸಿಜಾತಭವನ ಸತಿಗೆ । ಸರಸಚರಿತೆಗೆ ॥ ಹರುಷದಿಂದೆ ವಂದಿಸುವರ । ಪೊರೆವವಾಣಿಗೆ॥ ೧ ॥ ಕೀರಲಸಿತ ಪಾಣಿಗೆ ಸುರವಾರವಿನುತೆಗೆ ॥ ಶಾರದಾಂಬೆಗಾರತಿಯು । ಸೇರಿ ಬೆಳಗಿರೆ ॥ ೨ ॥ ಬಾಲಶರ್ವರೀಶಸದೃಶ । ಫಾಲೆಗವಲೆಗೆ ॥ ನೀಲದಾರತಿಯು ನೆತ್ತಿರೆ । ಶೀಲವತಿಯರು ॥ ೩ ॥ ಅಗಣಿತವಿಭವಾದಿಯುತೆಗೆ । ಸುಗುಣ ಪೂರ್ಣೆಗೆ ॥ ಜಗವ ಪೊರೆವ ದಿವ್ಯಗರಳ । ನಗರನಿಲಯೆಗೆ ॥ ೪ ॥

॥ ೬೨ ॥ ರಾಗ, [ಧಾಟಿ- ಒಹು ಶಿಣಲಿ ನೇತ್ರ ಮಾಝ್ಯ ಹರಿ ಕಾಂಹೊ] ತಾಳ

ಆರತಿ ಮಾಡುವೆನೂ । ಶ್ರೀಲಕ್ಷ್ಮೀಕಾಂತಗೆ ॥ ಪಲ್ಲ ॥ ಮಾನಿನಿ ಪಾಂಚಾಲಿಯು । ಮಾನವನು ಕಾಯ್ದಗೆ ॥ ದುಷ್ಟಶಿಕ್ಷಾ । ಶಿಷ್ಟರಕ್ಷಾ । ಭಕ್ತಪಕ್ಷಾ। ಪದುಮಾಕ್ಷಾ ॥ ೧ ॥ ಸುನೀತೆಯ ಪುತ್ರ ಧ್ರುವನಿಗೆ । ನಿಜರೂಪ ತೋರಿದೆ ॥ ಗರುಡಗಮನಾ । ಉರಗಶಯನಾ ॥ ಪರಮ ಕರುಣಾ । ದುರಿತಹರಣಾ ॥ ॥ ೨ ॥ ಗೌತಮ ಪತ್ನಿ ಅಹಲ್ಯೆಯ । ಉದ್ಧಾರ ಮಾಡಿದೆ ॥ ಮಂದರಧರನೇ । ಚಕ್ರಧರನೇ । ನಕ್ರಹರನೇ । ಕರಿವರದನೇ ॥ ೩ ॥

॥ ೬೩ ॥ ರಾಗ, ಕಾಪಿ [ಧಾಟಿ:- ಈಸುವ ಸಂತಾಗವಾ] ಆದಿತಾಳ

ಆರತಿಯಾ ಬೆಳಗಿರೆ । ಸಾರಸಾಭಮುಖಿ ಶ್ರೀರಮಣಿಗೆ ॥ಪಲ್ಲ॥ ಕಡಗ ಕಂಕಣಗಳ । ಬೆಡಗಿನಿಂ ಧರಿಸುತಾ । ಬಡವರ ಪೊರೆಯುವ । ಮಡದಿ ಮಣಿಗೆ ॥ ೧ ॥ ದೇವ ರಮಾಮಣಿ । ಭಾವವಂತು ವರ ॥ ಏವ ಸುದತಿಯರು । ನೀವು ಈ ರಮಣಿಗೆ ॥ ೨ ॥ ಹೀರದ ತಟ್ಟೆಯೊಳ್ । ಚಾರು ಮುತ್ತುಗಳನ್ನು ॥ ನಾರಿಯರ್ಪರಸುತ । ಶ್ರೀರಮಣಿಗೆ ॥ ೩ ॥

॥ ೬೪ ॥ ರಾಗ, ಕೇತಾರ [ಧಾಟಿ:- ಆರತಿ ಎತ್ತಿದರೂ । ಶ್ರೀಲೋಲಗೆ] ಏಕತಾಳ

ಆರತಿ ಬೆಳಗಿರೆ ನೀ । ಕೃಷ್ಣಮೂರುತಿ । ಗಾರತಿ ಬೆಳಗಿರೆ ನೀ ॥ಪಲ್ಲ॥ ಆರತಿ ಬೆಳಗಿರೆ ಸಾರಸನಯನನಗೆ। ಮಾರಸುಂದರ ಸುಕುಮಾರ ಶ್ರೀಕೃಷ್ಣಗೆ॥ ಆರತಿ ಬೆಳಗಿರೆ ನೀ ॥ ೧ ॥ ಸುರರು ಮೊರೆಯಿಡಲು । ವರಹಾವತಾರವೆತ್ತಿ ॥ ಪೊರೆದ ಶ್ರೀದೇವನಿಗೆ । ನಾರಿಯರೆಲ್ಲರು ॥ ಆರತಿ ಬೆಳಗಿರೆ ನೀ ॥ ೨ ॥ ಮಾನುನಿ ದ್ರೌಪದಿಯ। ಮಾನವಕಾಯ್ದವಗೆ। ದೀನ ಮಹಾತ್ಮನಿಗೆ। ಶ್ರೀನೀಲ ಶ್ಯಾಮಗೆ ॥ ಆರತಿ ಬೆಳಗಿರೆ ನೀ ೩॥ ಯೇಣಾಂಕವದನೆಯು । ಸ್ಮರಿಸುವಳ್ ನಿಮ್ಮನು॥ ಮಾನದಿಂದಲಿ ಬಲು । ಜ್ಞಾನವಂತನಿಗೆ ॥ ಆರತಿ ಬೆಳಗಿರೆ ನೀ ॥ ೪ ॥

॥ ೬೫ ॥ ರಾಗ, ಬೇಹಾಗ್ [ಧಾಟಿ:- ಮುತ್ತಿನಾರತಿಯೆತ್ತುವೇ । ಎನ್ನ] ಆದಿತಾಳ

ಎತ್ತಿದಳಾರತಿಯ । ಶ್ರೀಸತ್ಯಭಾಮೆ । ಎತ್ತಿದಳಾರತಿಯ ॥ ಪಲ್ಲ ॥ ಗೋಕುಲದೊಳುಪುಟ್ಟ । ಗೋವುಗಳನೆ ಕಾಯ್ದ । ಗೋಪಾಲ ಶ್ರೀ ಕೃಷ್ಣ ಪತಿಯಾಗಬೇಕೆಂದು ॥ ಎತ್ತಿದಳಾರತಿಯಾ ॥ ೧ ॥ ಮಥುರೆಯೊಳಗೆ ಪುಟ್ಟಿ ಅಥವಾ ಕಂಸನ ಕೊಂದ। ಮಧುಸೂದನ ಕೃಷ್ಣ ಪತಿಯಾಗಬೇಕೆಂದು ॥ ಎತ್ತಿದಳಾರತಿಯಾ ॥ ೨ ಗೊಲ್ಲರ ಮನೆಯಲ್ಲಿ । ಹಾಲುಮೊಸರು ಕದ್ದ । ಕಳ್ಳ ಶ್ರೀಕೃಷ್ಣನು । ಪತಿಯಾಗಬೇಕೆಂದು ॥ ಎತ್ತಿದಳಾರತಿಯಾ ॥ ೩ ॥ ಆಲದೆಲೆಯ ಮೇಲೆ ಬಾಲನಾಗಿರುವಂಥ । ನೀಲ ಶ್ರೀಕೃಷ್ಣನು ಪತಿಯಾಗಬೇಕೆಂದು ॥ ಎತ್ತಿದಳಾರತಿಯಾ ॥ ೪ ॥ ಉಡುವ ಸೀರೆಗಳ್ ಕದ್ದು । ಕಡಹದ ಮರನೇರ್ದ ॥ ಉಡುಪಿಯ ಶ್ರೀಕೃಷ್ಣ । ಪತಿಯಾಗಬೇಕೆಂದು ॥ ೫ ॥

॥ ೬೬ ॥ ಕಾಂಬೋಧಿ [ಧಾಟಿ:- ಕಾಶಿಪೀತಾಂಬರ ಕೈಯ್ಯಲ್ಲಿ] ಏಕತಾಳ

ಚಿತ್ತಜನಯ್ಯ ಶ್ರೀ ರುಕ್ಮಿಣೀಸಹಿತ । ಮುತ್ತಿನಹಸೆಯ ಮೇಲ್ಕುಳಿತು ರಂಜಿಸುತ । ಮುತ್ತೈದೆಯರೆಲ್ಲ ಸ್ವರವೆತ್ತಿ ಪಾಡುತ । ವೃತ್ತವು ರಾಗದಿಂ ಮುಡಿಲನು ತುಂಬುತ । ಮುತ್ತಿನಾರತಿಯ ಬೆಳಗೀರೆ ॥ ಶೋಭಾನೆ ॥ ೧ ॥ ಭೇರಿಸಗಾರಿ ತಮ್ಮಟೆ ತೂರ್ಯತ್ರಯದಿ । ಧಾರುಣಿಸುರರು ಪೇಳುವ ಮಂತ್ರಾಗಮದಿ । ಚಾರುತರದ ಸಂಗೀತನರ್ತನದಿ । ವಾರಿಜಾಕ್ಷಿಯರು ಜೋಡಿನೊಳಿದ್ದು ಮುದದಿಂದ । ಕುರುಜಿನಾರತಿಯಾ ಬೆಳಗೀರೆ ॥ ಶೋಭಾನೆ ॥ ॥ ೨ ॥ ಮಂಗಳಮಹಿಮ ಶ್ರೀರಂಗನಾಯಕಗೆ। ಭೃಂಗಕುಂತಳೆ ಸುಕುರಂಗಲೋಚನೆಗೆ ॥ ಅಂಗಜ ಜನಕ ಮತಂಗ ಗಾಮಿನಿಗೆ । ತುಂಗಕುಚೆಯರು ಜೋಡಿನೊಳಿದ್ದು ಮುದದಿಂದ । ಮಂಗಳಾರತಿಯಾ ಬೆಳಗೀರೆ ಶೋ. ೩ ॥

|| ೬೭ || ರಾಗ, ಸಾವೇರಿ [ಧಾಟಿ:-ಚಿತ್ರಜನ್ಮೈಯ್ಯ ಶ್ರೀಚಿತ್ರಕೇಶವಗೆ] ಏಕತಾಳ

ರಾಜಿಪ ಮಣಿಮಯ ರತ್ನಪೀಠದಲಿ । ರಾಜರಾಜ ಶ್ರೀರಾಮ ಕುಳ್ಳಿರಲು ॥ ರಾಜಾಂಬಕಿ ಸೀತೆ ಯಡದೊಳೊಪ್ಪಿರಲು । ರಾಜವದನೆಯರು ಹರಿವಾಣದೊಳಗಿನ । ರಾಜಿಸುವಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಕನಕಕುಂಡಲಧರ ಕೌಸ್ತುಭಾಂಕಿತಗೆ । ಕನಕಾಂಬರ ರತ್ನಮಣಿ ಭೂಷಣಗೆ ॥ ಕನಕಕಿರಿಟ ಕುಂಡಲಾಲಂಕೃತಗೆ । ಕನಕಾಭರಣದಿ ಕಮಲನಯನನಿಗೆ॥ ಕನಕದಾರತಿಯಾ ಬೆಳಗೀರೆ ॥ ಶೋ ॥೨॥ ಮುತ್ತಿನೋಲೆಯು ಹಾರ ಪದಕನಿಟ್ಟವಳು । ಮುಕ್ತಿನಬೊಟ್ಟು ಮೂಗುತಿ ಇಟ್ಟವಳು । ಮುತ್ತಿನ ಕಡಗ ಮುಂಗೈಯೊಳೊಪ್ಪಿರಲು। ಮುತ್ತೈದೆಯರು ರಘೂತ್ತಮ ಸೀತೆಗೆ॥ ಮುತ್ತಿನಾರತಿಯಾ ಬೆಳಗೀರೆ ॥ ಶೋ ೩ ॥ ದಶರಥರಾಯನ ಶಿಶುವೆನಿಸಿದಗೆ। ದಶಶಿರ ಕೊರಳನು ಕತ್ತರಿಸಿದಗೆ । ಚತುರ್ದಶ ಭುವನವ ಆಳಿದಾತನಿಗೆ ॥ ದಶವಿಧದಲಿ ಸೀತಾ ರಾಮನ ಚರಣಕೆ । ಕುಶಲದಾರತಿಯಾ ಬೆಳಗೀರೆ । ॥ ಶೋ ॥ ೪ ॥ ನಾರದ ವಂದ್ಯಗೆ ನಂದಕಂದನಿಗೆ । ನಾರಿ ದ್ರೌಪದಿಗಕ್ಷಯವನಿತ್ತವಗೆ ॥ ನಾರದಮುಖ್ಯಜಾಮಿಳನ ರಕ್ಷಿಸಿದಗೆ ನಾರಾಯಣ ನಮೋ ನಮೋ ಯೆಂದು ಸ್ತುತಿಸುತ । ನಾರಿಯರಾರತಿಯಾ ಬೆಳಗೀರೆ ॥ ॥ ಶೋ ॥ ೫ ॥ ಶ್ರೀ ॥

|| ೬೮ || ರಾಗ,ಸಾವೇರಿ [ಧಾಟಿ - ಈಶಸುತಗೆ ನೆನಗಪಲಿ ಕಬ್ಬುಯೊಳ್ಳುಂಡೆ] ಆದಿತಾಳ

ನಂದಾನಂದನ ಶ್ರೀಮುಕುಂದ ಮಾಧವಗೆ । ನಂದಗೋಕುಲದೊಳಗಿರುವ ನಾರಿಯರು ॥ ಒಂದು ಮನಸಿನಲಿಂತು ಪೂಜಿಸಿ । ಇಂದಿರೇಶನ ಚರಣಕೆರಗುತ । ಚಂದದಿಂದಾರತಿಯ ಪರಮಾನಂದ ಗುಣಗಳ ಭರಿತ ಹರಿಗೋ ॥ ಎಂದಗಾರತಿಯಾ ಬೆಳಗೀರೆ॥ ಶೋ ॥೧॥ ಯಶೋದೆಬಾಲ ವಿಠೋಲ ಗೋಪಾಲ । ಕೇಶವ ಶ್ರೀವನಮಾಲಾ ಸುಶೀಲಾ ॥ ಶೇಷಶಯನನೆ ರುಕ್ಮಿಣಿಯ ಪ್ರಾ । ಣೇಶ ಪಾವನ ರೂಪ ಭಕ್ತರ । ತೋಷದಿಂದಲಿ ಕಾಯ್ವ ಗೋಕುಲ । ವಾಸ ಮೂರ್ಜಗದೀಶ ಭವನಿಗೆ ॥ ತೋಷದೊಳಾರತಿಯಾ ಬೆಳಗೀರೆ ಶೋಭಾನೆ ॥೨॥ ಮಂಗಲ ಯದುಕುಲದೊಡೆಯ ಮುರಾರಿ । ಮಂಗಲ ಜಯ ನರಕಾಸುರ ವೈರಿ ॥ ಮಂಗಲಂ ಶಿಶುಪಾಲ ಛೇದನ । ಮಂಗಲಂ ಪೌಂಡ್ರಿಕನ ಮರ್ದನ । ಮಂಗಲಂ ಶ್ರೀವೆಂಕಟೇಶಗೆ । ಮಂಗಲಂ ಪದ್ಮಾವತೀಶಗೆ । ಮಂಗಳಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೭೯ ॥ ರಾಗ, ಸುರುಟಿ [ಧಾಟಿ:- ಕಾರುಣ್ಯನೂರುತಿಗೆ । ಪಾಂಡು] ಆದಿತಾಳ

ನಂದಗೋಕುಲದೊಳಗೆ । ಆಡುವ । ನಂದ ಗೋಪಿಯು ಕಂಡಾ ॥ ಬಂದು ಮಧುರೆಲಿ ಮಾವನ ಕೊಂದಾ । ಮಂದರಧರ ಗೋವಿಂದ ಗೋಪಾಲಗೆ ॥ ಕುಂದಣದಾರತಿಯಾ ಬೆಳಗೀರೆ ॥ ಶೋ ॥ ೧ ॥ ಬೆಣ್ಣೆ ಮಾರಲು ಪೋದಾ । ಗೊಲ್ಲರ । ಹೆಣ್ಣಿಗೆ ಮರುಳಾದ ॥ ಚಿನ್ಮಯ ಮನೆಮನೆ ಹಾಲ್ಮೊಸರನು ಕದ್ದು । ಕಣ್ಣಸನ್ನೆಯು ಮಾಡಿ ಕರೆವ ಕೃಷ್ಣಯ್ಯಗೆ ॥ ಹೊನ್ನಿನಾರತಿಯಾ ಬೆಳಗೀರೆ ॥ ಶೋ ॥ ೨ ॥ ಜಲಜಾಕ್ಷಿಯರೆಲ್ಲಾ । ಜಲಕ್ರೀಡೆ । ಆಡುವ ಸಮಯದಲಿ ॥ ಉಡುವ ಸೀರೆಯ ಕದ್ದು । ಕಡಹದ ಮರನೇರಿ ದುಡುಕು ಮಾಡುವ ನಮ್ಮ । ಒಡೆಯ ಕೃಷ್ಣಯ್ಯಗೆ ಜಡಜದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೭೦ ॥ ರಾಗ, ಸಾವೇರಿ [ಧಾಟಿ:- ರಂಗನ ಪರಿಣಯ ಐವನ] ಆದಿತಾಳ

ಧರಣಿಪಾಲಕ ದಶರಥನಾತ್ಮಭವನಿಗೆ । ಧೊರೆ ಜನಕ ಜಾಮಾತಗೆ ॥ ನಾರಿಯರ್ಪೂಸ । ತರ ಗಂಧಾಕ್ಷತೆ ಮಲ್ಲಿಗೆ । ಪನ್ನೀರತ್ತರ್ । ವರಸುತ್ತ ವರಸಂಪಿಗೆ । ಪರಿಮಳವು ಬೆಳಗೆ ॥ ಅರಳು ಕೇದಗೆ ಬಿರಿದ ತಾವರೆ । ಸರಸಿಜಾಕ್ಷಿಯರಿರದೆ ಕೊಳುತಲಿ । ಕರೆದು ನೀ ಬಾರೆಂದು ತ್ವರಿತದಿ । ತರಳೆಯರು ಸಂತೋಷದಿಂದಲಿ ॥ ಕುರುಜಿನಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಮುಡಿಗೆ ಮಲ್ಲಿಗೆ ಜಾಜಿ । ಯೊಡೆವ ಕೇದಗೆ ಶಿರ । ಕಿಡುತತಿ ಬೆಡಗಿನಿಂದ ॥ ಹೊಂಬಣ್ಣದ । ಮಡಿವಸ್ತ್ರದುಡುಪಿನಿಂದ । ನೋಡುವ ಜನ । ರೆಡೆ ನಡವ ಸಾರಿಯಿಂದ । ನಡೆಯುತಿಹ ಚಂದ ॥ ನುಡಿಯಲರಿಯದು । ನಡುವ ಬಿಗಿದವ । ರಡಿಯಿಡುತ ನಡೆತಂದು ವಹಿಲದಿ । ಮಡದಿ ವರರನು ಕಡುಹಿನಿಂದಲಿ । ನುಡಿದು ಶೋಭನಪಾಡಿ ಪೊಗಳುತ ॥ ಜಡಜದಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ಹಣೆಗೆ ಗಂಧಾಕ್ಷತೆ । ಯನು ಗಂಧದೆಣ್ಣೆಯ । ಘನವತ್ತರನು ಸಹಿತ । ತೊಡಿಸುತ ಬೇಗ । ಧ್ವನಿತೆ ವಲ್ಲಭರಿಗಿತ್ತ । ಸುರತ್ನಾಭ । ರಣಗಳ ತೊಡಿಸಿ ಮುತ್ತಾ । ಮೋಹವಿರಿಸುತ್ತಾ ॥ ವನಿತೆಯರು ಸಂತೋಷದಿಂದಲಿ । ದಿನಪ ತೇಜದ ದಂಪತಿಗಳನು । ಅನುದಿನದಿ ಹರಿ ಕಾಯಲೆನುತಲಿ । ವಿನಯದಿಂ ವರಸುತ್ತ ಪಾಡುತ । ಕನಕದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥ ಶ್ರೀ

॥ ೭೧ ॥ ರಾಗ, [ಧಾಟಿ -ಆಗದೆ ಹರಿನಾಮುನಿನಗೆ। ಪಾಪ। ಹೋಗದೆ ಅರೆಕ್ಷಣ] ತಾಳ

ದಶರಥನುದರದಿ ಜನಿಸೀ । ಮುನಿ। ಕೌಶಿಕನ ಯಾಗವ ನೆರೆ ಸಲಿಸೀ ॥ ಅಸುರೆ ತಾಟಕಿಯು ಸಂಹರಿಸಿ । ವರ । ಋಷಿಯು ಶಾಪವ ಪರಿಹರಿಸೀ ॥ ಬಂದು । ಮಿಥುಳಾಪುರದ ಜನಕನ ಸುತೆ ವಲಿಸಿ । ಪಥದಿ ಭಾರ್ಗವನ ರಂಜಿಸಿದ ಶ್ರೀರಾಮುಗೆ ॥ ಕುಶಲದಾರತಿಯಾ ಬೆಳಗೀರೆ ॥ ಶೋ ॥ ೧ ॥ ಪಡೆದ ಪಿತನ ಮಾತ ಕೇಳಿ । ತನ್ನ । ಮುಡದಿ ಅನುಜರೊಡಗೂಡಿ । ಬಂದು। ಅಡವಿ ಸಂಚಾರವ ಮಾಡಿ । ಭರತ । ನೊಡನೆ ಪಾದುಕೆಯನ್ನೆ ನೀಡೀ । ಬಂದು ॥ ಕಡುಬೇಗದಲಿ ಚಿತ್ರಕೂಟದ ಶಿಖರವ । ಮುಡದಿ ಜಾನಕಿ ಸಹ ಪರ್ನಶಾಲೆ ಯೊಳಿದ್ದ। ಒಡೆಯಗಾರತಿಯಾ ಬೆಳಗೀರೆ ॥ ೨ ॥ ಅಸುರೆಯು ನಾಶಿಕವಂದು । ಖೂಳ । ದಶಕಂಠನನುಜೆಯು ಗೆಲಿದು । ಖಳ । ಮುಸುಕಾದಿಗಳು ಯೆಲ್ಲ ನೆರೆದು । ರವಿ ॥ ಸುತಗೆ ಶಕ್ತಿಯು ತೋರಿ ವಾಲಿಯು ಸದೆದೂ । ಸ್ತುತಿಸು ತಲೈತಂದ ವಿಭಿಷಣಗೊಲಿದಿಹ ॥ ಪೃಥಿವಿ ಪಾಲಿಪಗೇ ಜಯು ಜಯು ॥ ೩ ॥ ಅಂಗದಾದಿಗಳೆಲ್ಲ ನೆರೆವೂ॥ ಆ । ನಂಬವಿ ಸೇತುವೆಬಲಿದೂ । ಖಳ । ಕುಂಭ ಕರ್ಣಾದ್ಯರಗೆಲಿದೂ । ಮುದ ॥ ದಿಂದ ಪಟ್ಟಣವ ವಿಭೀಷಣನಿಂಗಿತ್ತು। ಜಯು ಮುಖದಿಂದ ಜಾನಕಿ ಸಹ ಪುರಕ್ಕೈದ ॥ ರಘುನಂದನಗಾರತಿಯಾಬೆಳಗೀರೆ॥ ೪ ॥ ಸಾಶಿರನಾಮದೊಡೆಯುಗೆ । ಮಹಾ । ಭಾಸುರಕೋಟಿತೇಜನಿಗೆ ॥ ಬಂದು ಶೇಷನಮೇಲೊರಗಿದಗೆ । ಸುಪ್ರ॥ ಕಾಶಿನಿಯುರು ಸಪ್ತಸ್ವರದಿಂದ ಪಾಡುತ್ತಾ। ಕೇಶವನಾರಾಯುಣಗೆ ನಾರಿಯುರು ಹೊಸ ಭಾಷಿತದಾರತಿಯಾ ಬೆಳ ಗೀರೆ ॥ ೫ ॥

॥ ೭೨ ॥ ರಾಗ, ಹಮ್ಮೀರಕಲ್ಯಾಣಿ [ಧಾಟಿ:-ನೋಡು ನೋಡು ಗೋಪಿ ನಿನ್ನ] ತಾಳ

ದಾನವಾರಿಗಾರತಿಯಾ ತಂದು ಬೆಳಗಿರೆ ॥ ಪ ॥ ಗಾನಲೋಲನಾದ ಹರಿಯುನಿಂದು ಪಾಡಿರೆ ॥ ಅನು ॥ ಸಲಿಲಕೇಳಿಗಿಳಿದ ವಧೂಜನದ ವಸನವ॥ ನಲಿದುಕದ್ದ ಧೀರ ರಮಾಲೋಲಗೊಲವಿನಿಂ ॥ ೧ ॥ ವಲ್ಲವಿಯುರ ಮಂದಿರ ದೊಳು ಬೆಣ್ಣೆಮೊಸರನು ॥ ಮೆಲ್ಲನೆಮಿಗೆ ಕದ್ದುತಿಂದ ಬಾಲಕೃಷ್ಣಗೆ ॥ ೨ ॥ ಘೋರಭುಜಗದರ್ಪವ ಪರಿಹರಿಸಿದಾತಗೆ ॥ ಕ್ರೂರಧೇನುಕಾದಿಖಳರ ಕೊಂದ ವೀರಗೆ ॥ ೩ ॥ ಪಾಂಡವಾಪ್ತಸಖಗೆ ಕಂಸದೈತ್ಯಕಾಲಗೆ ॥ ಚಂಡಭುಜವಿ ರಾಜಮಾನ ಕೃಷ್ಣರಾಜಗೆ ॥ ೪ ॥ ಸುರಸಮೂಹ ನಿತ್ಯಗೀತ ನೈಜಕೀರ್ತಿಗೆ॥ ಗರಳನಗರದಲ್ಲಿ ಮೆರೆವ ದಿವ್ಯಮೂರ್ತಿಗೆ ॥ ೫ ॥

॥ ೭೩ ॥ ರಾಗ, ಮಧ್ಯಮಾವತಿ [ಧಾಟಿ:- ಏಳೂ ಸದ್ಗುಣಧಾಮ ಹಸೆಗೀಗ] ಏಕತಾಳ

ದಶರಥನುದರದಿ ಶಿಶುವಾಗಿ ಜನಿಸಿ । ಅಸುರೆತಾಟಕಿಯು ಸಂಹರಿಸಿ ॥ ಅಸುರ ರಕ್ಕಸರನ್ನು ಗೆಲಿದು ಅಹಲ್ಯೆಯು । ಗೌತುಮ ಮುನಿಗಿತ್ತ ಮುದದಿ ॥ ಚಾಲ್ ॥ ಋಷಿಯ ಯಾಗವ ಕಾಯ್ದು ಮಿಥುಳಾಪುರಕೆ ಬಂದು। ಸತಿಯ ನೊಲಿಸಿ ಭಾರ್ಗವನ ಗರ್ವವಳಿದು । ಪಿತನವಾಕ್ಯವ ಕೇಳಿ ತೆರಳಿದ ರಾಮಗೆ॥ ಸತಿಯುರಾರತಿಯು ಬೆಳಗೀರೆ ॥ ಶೋ ॥ ೧ ॥ ಮಿತ್ರೆಜಾನಕಿ ಲಕ್ಷ್ಮಣ ಸಹ ರಘುರಾಮ । ಒಪ್ಪಿ ಪಂಚವಟಿಯೊಳಿರಲು ॥ ದುಷ್ಟೆ ಶೂರ್ಪನಖಿಯು ಮೂಗ ತರಿದು ಮೃಗವ । ಮಿತ್ರೆಗೋಸುಗ ರಾಮ ತೆರಳಿ ॥ ಚಾಲ್ ॥ ಮಿತ್ರೆಯು ಕಾಣದೆ ಕಳವಳವಡುತಿರೆ। ಅತ್ತರಾವಣ ಸೀತೆಯನಪಹರಿಸಲು । ಗೊತ್ತಾಗಿ ಪೇಳ್ದ ಜಠಾಯುಗೆ ಮುಕ್ತಿಯು ॥ ಇತ್ತವಗಾರತಿಯು ಬೆಳಗೀರೆ ॥ ॥ ಶೋ ॥ ೨ ॥ ವಾಲಿಯುಕೊಂದು ಸುಗ್ರೀವ ಸೇನೆಯು ಕೂಡಿ । ಪ್ರೇಮದಿ ಸೇತುವೆ ಕಟ್ಟಿ ॥ ರಾವಣ ಕುಂಭಕರ್ಣರ ಕೊಂದು ಲಂಕೆಯು । ಪ್ರೇಮದಿ ಭಕ್ತನಿಗಿತ್ತು ॥ ಚಾಲ್ ॥ ನಾರಿ ಜಾನಕಿ ಸಹಾ । ಏರಿ ಪುಷ್ಪಕವನು । ಭೇರಿ ಢಮಾಮಿ ಮದ್ದಳೆ ವಾದ್ಯಗಳಿಂದ । ತಾನೆ ಅಯೋಧ್ಯೆಗೆ ತೆರಳಿದ ರಾಮಗೆ ॥ ಮಾನುನಿಯರಾರತಿಯು ಬೆಳಗೀರೆ ॥ ಶೋಭಾನೆ ॥ ೩ ॥

॥ ೭೪ ॥ ರಾಗ, ಕೇತಾರ [ಧಾಟಿ – ಅಂಗನೆಯರಾರತಿಯಾ । ಪಾಂಡ.] ಏಕತಾಳ

ಆರತಿ ಎತ್ತಿದರೂ। ಶ್ರೀಲೋಲಗೆ ಸತಿಯರು ॥ ಪಲ್ಲ ॥ ಘೋರದೈತ್ಯನ ಸಂಹಾರವ ಮಾಡಿದ । ಮಾರಜನಕ ಮುದ್ದು ನೀರಜವದನಗೆ ॥ ೧ ॥ ವಂದಿತ ಭಕ್ತರ । ಚಂದದಿ ಸಲಹುವ । ನಂದನ ಕಂದ ಮುನಿ । ವೃಂದ ವಂದಿತ ನಿಗೆ ॥ ೨ ॥ ಕ್ಲೇಶ ದುರಿತ ಭಯ । ಲೇಶವಿನಾಶಗೆ । ಈಶ ಪರಮೇಶ ಪರ । ದೇಶಾವತಾರನಿಗೆ ॥ ೩ ॥ ಬಾಲತನದಿ ಬಲು । ಲೀಲೆಯ ಮಾಡಿದ । ಬಾಲಾ ವನಮಾಲಾ ಸು । ಶೀಲಾ ಶ್ರೀಕೃಷ್ಣಗೆ ॥ ೪ ॥

॥ ೭೫ ॥ ರಾಗ, ಸೌರಾಷ್ಟ್ರ [ಧಾಟಿ:- ಚಿತ್ರಜನ್ಮೆಯ್ಯ ಶ್ರೀಚಿತ್ರಕೇಶನಗೆ] ಏಕತಾಳ

ಭೂದೇವಿಯರಸ ವೆಂಕಟರಾಯನಿಗೆ । ಉದಧಿಶಯನ ಶ್ರೀಪದುಮ ನಾಭನಿಗೇ ॥ ಸದಮಲನಾಗಿಹ ಮಧುಸೂದನನಿಗೆ ॥ ಸುದತಿಯರೆಲ್ಲರು ನೆರೆದು ಮಾಧವನಿಗೆ ॥ ಮುದದಿಂದಾರತಿಯಾ ಬೆಳಗೀರೆ ॥ ಶೋ ॥ ೧ ॥ ಅಂದುಕ್ಷೀರಾಂಬುನಿಧಿಮೊದಲಾಗಿ । ಇಂದಿರೆ ಹರುಷದಿಂದುದಿಸಿ ಬಂದು ॥ ಕಂದರ್ಪ ಕೋಟಿಲಾವಣ್ಯ ಮೂರುತಿಯಾದ । ಮಂದಾರಮಾಲೆಯು ಹಾಕಿದ

ದೇವಗೆ ॥ ಕುಂದಣದಾರತಿಯ ಬೆಳಗೀರೆ ॥ ಶೋ ॥ ೨ ॥ ಜನಕನ ಮನೆಯಲ್ಲಿ ರಾಜಾಧಿರಾಜರು । ಎಣೆಯಿಲ್ಲದಲೆ ಬರುತಿರಲು ॥ ಸನಕಾದಿವಂದ್ಯನ ಕಂಡು ಸಂತೋಷದಿ । ಜಾನಕಿ ಮಾಲೆಯ ಹಾಕಿದ ರಾಮಗೆ ॥ ರನ್ನದಾರತಿಯಾ ಬೆಳಗೀರೆ ॥ ಶೋ ॥ ೩ ॥ ರುಕುಮಿಣಿಯನು ಶಿಶುಪಾಲಗೀಯುವುದೆಂದು । ಸಕಲರಾಯರು ಬಂದು ಇರಲಾಗಿ ॥ ಭಕತವತ್ಸಲನನ್ನು ಕಂಡು ಸಂತೋಷದಿ । ರುಕುಮಿಣಿ ಮಾಲೆಯ ಹಾಕಿದ ಕೃಷ್ಣಗೆ ॥ ಪಂಕಜದಾರತಿಯಾ ಬೆಳಗೀರೆ ॥ ಶೋ ॥ ೪ ॥ ಸತ್ಯಭಾಮೆಯು ನೀಲಭದ್ರೆ ಕಾಳಿಂದಿಯು । ಮಿತ್ರವಿಂದೆ ಲಕ್ಷ್ಮಣೆ ಜಾಂಬವತಿಯು ॥ ಮತ್ತೆ ಆ ಸೋಳಾ ಸಹಸ್ರಕನ್ನಿಕೆಯು । ಪ್ರತ್ಯಕ್ಷನಾಗಿದ್ದ ಕಲ್ಯಾಣರೂಪಗೆ ॥ ಮುತ್ತಿನಾರತಿಯಾ ಬೆಳಗೀರೆ ॥ ಶೋ ॥೫॥

॥ ೭೬ ॥ ರಾಗ, [ಧಾಟಿ:- ] ಆದಿತಾಳ

ಮಾರಸುಂದರ ಸುಕುಮಾರನಿಗೆ । ಆರತಿ ಪಾಡಿರೆ ನಾರಿಯರು ॥ ಪ ॥ ನಾರಿಯರು ಸುಂದರಿಯರು । ಸುಂದರಿಯರು ಶುಕವಾಣಿಯರು ॥ ಅ ಪ. । ವೇದವನ್ನು ತಂದವಗೆ ಧೀರನಿಗೆ । ಮೇದಿನೀಭಾರವನು ಪೊತ್ತವನಿಗೆ ॥ ೧ ॥ ಕೋರೆದಾಡೆಯಿಂದ ಭೂಮಿ ತಂದವನಿಗೆ । ಕಂದನ ನುಡಿಯ ಕೇಳಿ ಬಂದವನಿಗೆ ॥ ೨ ॥ ಬಾಲನಾಗಿ ಭೂಮಿಯನ್ನು ಬೇಡಿದವಗೆ । ತಾಯಿಯ ಶಿರವ ಚಂಡಾಡಿದವಗೆ ॥ ೩ ॥ ಸೇತುಕಟ್ಟಿ ಸೀತೆಯನ್ನು ತಂದವನಿಗೆ । ಪ್ರೀತಿಯಿಂದ ಕೊಳಲನೂದಿ ಬಂದವನಿಗೆ ॥ ೪ ॥ ಬೌದ್ಧಾವತಾರನಾಗಿ ಬಂದವನಿಗೆ । ಮ್ಲೇಂಛರನ್ನು ನಾಶಗೈದ ಅಶ್ವರೂಢಗೆ ॥ ೫ ॥

॥ ೭೭ ॥ ರಾಗ, ಸಾವೇರಿ [ಧಾಟಿ:-ಮೃದುಬಾಷಿಣಿ ಗುಣಸದನಪ್ರವೀಣೆ] ಏಕತಾಳ

ರಂಜಿಪ ಗಾತ್ರೆಗೆ ರಾಜೀವನೇತ್ರೆಗೆ । ಮಂಜುಲವಾಣಿಗೆ ಮದನತ್ರಿವೇಣಿಗೆ ॥ ಕುಂಜರಗಮನದ ಜ್ವಾಲಿನಿಗೊಲಿದು ॥ ಪಂಜೆಯದಾರತಿಯಾ ಬೆಳಗಿರೆ ॥ ಶೋಭಾನೆ ॥ ೧ ॥ ಸಾರಶೃಂಗಾರಿಗೆ ಸದ್ಗುಣಧಾಮೆಗೆ । ನೀರಜನೇತ್ರೆಗೆ ನಿರ್ಜರಸ್ತೋತ್ರೆಗೆ ॥ ಪಾರಾವಾರೆ ಗಂಭೀರಣಿ ಜ್ವಾಲಿನಿ ॥ ಗೊಲಿದುಪನಾರಿಯರು ಬೆಳಗೀರೆ ॥ ಶೋಭಾನೆ ॥ ೨ ॥ ಶ್ರೀಕರ ಕರ್ಣೆಗೆ ಶ್ರೀಪರಿಪೂರ್ಣೆಗೆ । ಆಕಾಶಮಧ್ಯೆಗೆ ಅತಿಶಯವಿದ್ಯೆಗೆ ॥ ಲೋಕವಿನುತೆ ಜ್ವಾಲಿನಿಗೊಲಿದು ಸ । ವಿವೇಕದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೭೮ ॥ ರಾಗ, ಕಾಂಬೋಧಿ [ಧಾಟಿ.- ಕಾಶಿಪೀತಾಂಬರ ಕೈಯ್ಯಲ್ಲಿ] ಏಕತಾಳ

ಚಿತ್ತಜನೈಯ್ಯ ಶ್ರೀಚಿತ್ರಕೇಶವಗೆ । ಹತ್ತಾವತಾರದ ನಾರಾಯಣಗೆ ॥ ಭಕ್ತರ ಸಲಹುವ ಚಲುವ ಮಾಧವಗೆ । ಮಿತ್ರೆಯರೆಲ್ಲರು ನೆರೆದು ಗೋವಿಂದಗೆ॥ ಮುತ್ತಿನಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಪನ್ನಗಶಯನ ಶ್ರೀ ಆದಿವಿಷ್ಣುವಿಗೆ । ಸುವರ್ಣವಾಹನ ಮುದ್ದು ಮಧುಸೂದನಗೆ ॥ ಚನ್ನಿಗರರಸ ಅಮಿತ ತ್ರಿವಿಕ್ರಮಗೆ । ಕನ್ನೆಯರೆಲ್ಲರು ನೆರೆದು ವಾಮನಗೆ॥ಚಿನ್ನದಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ಬಾಲಭಾಸ್ಕರಕೋಟಿ ತೇಜ ಶ್ರೀಧರಗೆ । ಬಾಲಧ್ರುವನ ಕ್ಯಾದ ಹೃಷೀಕೇಶನಿಗೆ ॥ ಪಾಲುಸಾಗರವಾಸ ಪದುಮನಾಭನಿಗೆ । ಬಾಲೆಯರೆಲ್ಲರು ನೆರೆದು ದಾಮೋದರಗೆ ॥ ನೀಲದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥ ಪಂಕಜಲೋಚನ ಸಂಕರ್ಷಣಗೆ । ಶಂಖನ ಗೆಲಿದ ಶ್ರೀ ವಾಸುದೇವನಿಗೇ ॥ ಬಿಂಕದಿ ದನುಜನ ಮುರಿದ ಪ್ರದ್ಯುಮ್ನನಿಗೇ । ಶಂಕ್ರೆರೆಲ್ಲರು ನೆರೆದು । ಅನಿರುದ್ಧನಿಗೇ ॥ ಕುಂಕುಮದಾರತಿಯಾ । ಬೆಳಗೀರೆ ॥ ॥ ಶೋ ॥ ೪ ॥ ದುರುಳ ಕಂಸನ ಗೆದ್ದ ಪುರುಷೋತ್ತಮಗೇ । ಗರಳ ಕಾಳಿಂಗನ ತುಳಿದಧೋಕ್ಷಜಗೇ ॥ ತರಳನ ಮಾತ ಕೇಳ್ದ ನಾರಸಿಂಹನಿಗೇ । ತರುಣರೆಲ್ಲರು ನೆರೆದು ವರದ ಅಚ್ಚುತನಿಗೆ॥ ಕುರುಜಿನಾರತಿಯಾ।ಬೆಳಗಿದರೂ॥ ॥ ಶೋ ॥ ೫ ॥ ವೇಣುನಾದ ಪ್ರಿಯ ಶ್ರೀ ಜನಾರ್ದನಗೇ । ಗೀರ್ವಾಣ ಪುರದ ಉಪೇಂದ್ರ ಮೂರುತಿಗೇ । ಪ್ರಾಣದೊಡೆಯ ಕರುಣಾಳು ಶ್ರೀಹರಿಗೆ। ಜಾಣೆಯರೆಲ್ಲರು ನೆರೆದು ಶ್ರೀಕೃಷ್ಣಗೆ ॥ ಮಾಣಿಕದಾರತಿಯಾ । ಬೆಳಗೀರೆ ॥ ॥ ಶೋ ॥ ೬ ॥ ಶಂಕರಸಖ ವಳಲಂಕಾಧಿಪಗೇ। ಶಂಖಚಕ್ರಾಂಕಿತ ಕೌಸ್ತುಭಧರಗೇ ॥ ಕಿಂಕರಜನ ಸಂರಕ್ಷ ಶ್ರೀಹರಿಗೇ । ಪಂಕಜನಾಭ ಶ್ರೀ ಗುರುವೆಂಕಟೇಶಗೆ ॥ ಶಂಖದಾರತಿಯಾ । ಬೆಳಗೀರೆ ॥ ಶೋಭಾನೆ ॥ ೭ ॥

॥ ೭೯ ॥ ರಾಗ, [ಧಾಟಿ:— ಕಲ್ಲುಸಕ್ಕರೆ ಕೊಳ್ಳಿರೊ] ತಾಳ

ಮುತ್ತಿನಾರತಿ ಎತ್ತುವೆ । ಎನ್ನರಸಗೆ। ರತ್ನದಾರತಿ ಮಾಡುವೆ ॥ ಪಲ್ಲ ॥ ಮುತ್ತಿನಾರತಿ ತಂದು । ಎತ್ತುವೆ ಹಿತದಲಿ । ಉತ್ತಮನಾದ ಶ್ರೀ । ಅತ್ತೆಯ ಮಗನಿಗೆ ॥ ೧ ॥ ನಾರೀಯರ ಮನ । ಸೂರೆಗೊಂಬವನಿಗೆ । ವಾರಿಜಕೃಷ್ಣ ನಿಮ್ಮ । ಪಾದಸೇರುವೆನೆಂದು ॥ ಮುತ್ತಿನಾರತಿ ॥ ೨ ॥ ಕಡಹದ ಮರನೇರಿ । ನಾರಿಯರ ಶೀರೆ ಶೆಳೆದು । ಉಡುವೆನೆಂದರೆ ಕೃಷ್ಣ । ಕೊಡದೆ ಓಡುವ ನಲ್ಲ ॥ ಮುತ್ತಿನಾರತಿ ಎತ್ತುವೆ ॥ ೩ ॥

॥ ೮೦ ॥ ರಾಗ, ಬೇಗಡೆ [ಧಾಟಿ:- ಇಂದಿರಾಧವಾ । ವಂದಿಸುವೆ ದೇವಾ] ಆದಿತಾಳ

ಮಂಗಳಾರತಿ । ಜಗನ್ನಾಥಗೀಗ ॥ ಪಲ್ಲ ॥ ವೇದಚೋರನನ್ನು । ಭೇದದಿಂ ಮರ್ದಿಸಿ ॥ ವಾದದಿಂದ ಸುರರಿಂ । ಭೇದಿಸೀ ಬಂದವಗೆ ॥ ೧ ॥ ಕೂರ್ಮರೂಪಿನಲ್ಲಿ । ಬೇಗದಿಂ ಬೆನ್ನಿಲಿ ॥ ಧಾರುಣಿ ಧಾರೂರಿ। ಪೊತ್ತುರಕ್ಷಿಸಿದೆ ॥ ೨ ॥ ಸುಂದರಾಕಾರಗೆ । ಸೂಕರಾ ರೂಪಗೆ ॥ ಕಂದನಿಗೊಲಿದ । ಕೇಸರೀ ರೂಪಗೆ ॥ ೩ ॥ ಮೂರಡಿ ಭೂಮಿಯು । ದಾನವ ಬೇಡಿದ ॥ ಶೂರ ಅಸುರರನ್ನು । ಬೇಗದಿಂ ಶೀಳಿದ ॥ ೪ ॥ ಮಾತೆಯು ವಾಕ್ಯದಿಂ । ಮೌನಿಯು ವೇಷದಿಂ ॥ ಪ್ರೀತಿಯು ತೋರಿದ ಯಶೋದಾಕಂದಗೆ ॥ ೫ ॥ ಬತ್ತಲೆ ನಿಂತವಗೆ । ಬೌದ್ಧಾವತಾರಗೆ ॥ ಮತ್ತೆ ಆ ಮ್ಲೇಂಛರ । ಮರ್ದನ ಧೀರಗೆ ॥ ೬ ॥ ಉದಧಿಯಾವಾಸಗೆ । ಉದಧಿನಿಲಯಗೆ ॥ ಬದರಿಯಾ ನಾಥಗೆ । ಬ್ರಹ್ಮರಿಂ ವಂದ್ಯಗೆ ॥ ೭ ॥

॥ ೮೧ ॥ ರಾಗ, [ಧಾಟಿ:- ಕೇಳು ಪ್ರಭಾವತಿ ಆಲಿಸಿ ನೀ] ಆದಿತಾಳ

ಮಂಗಳವಪಾಡಿ ಯದು । ಪುಂಗವಗೆ ಶೃಂಗರಿಸಿ ॥ ಸಂಗೀತವಿಲೋಲವರ । ಗಂಗೆಪಿತ ರಂಗನಿಗೆ ॥ ಪಲ್ಲ ॥ ನೀರಿನಲ್ಲಿ ಪೊಕ್ಕವಗೆ । ಭಾರವನು ಹೊತ್ತವಗೆ ॥ ಧಾರುಣಿಯು ತಂದವಗೆ । ತರಳನ ಕಾಯ್ದವಗೆ ॥ ೧ ॥ ದಾನವನು ಬೇಡಿದಗೆ । ಭೂನಾಥರ ಕೊಂದವಗೆ ॥ ಕಾನನದೊಳ್ ನಿಂದವಗೆ । ದೇವಕಿಯು ಕಂದನಿಗೆ ॥ ೨ ॥ ನಾರಿಯರ ಸೇರಿದಗೆ । ಚಾರು ಹಯವೇರಿದಗೆ ॥ ನಾರಾಯಣ ಮೂರುತಿಗೆ । ಧೀರ ವರ ಶ್ರೀಶನಿಗೆ ॥ ೩ ॥

॥ ೮೨ ॥ ರಾಗ, ಸುರುಟಿ [ಧಾಟಿ.- ಕಂಬು ಕಂಧರಿ । ಕಮಲನಾಭನ] ಚಾಪು

ಮುತ್ತಿನಾರತಿಯೆತ್ತಿರೆ ಶತ । ಪತ್ರಸಂಭವನರಸಿಗೆ ॥ ಪ ॥ ಮತ್ತವಾರಣಯಾನೆಗೆ ನವ । ಮತ್ತಕೋಕಿಲಗಾನೆಗೆ ॥ ಅ ॥ ನೃತ್ಯಗೀತವಿಲೋಲೆಗೆ ನತ । ಭೃತ್ಯಪಾಲನ ಶೀಲೆಗೆ ॥ ಸ್ತುತ್ಯಗುಣಮಣಿಮಾಲೆಗೆ ವರ । ನಿತ್ಯ ಸೌಖ್ಯವಿಶಾಲೆಗೆ ॥ ೧ ॥ ಪುಸ್ತಕಾಂಕಿತಪಾಣಿಗೆ ನಿಜ । ಹಸ್ತರಾಜಿತವೀಣೆಗೆ ॥ ಪ್ರಸ್ತುತಾಮರಶ್ರೇಣಿಗೆ ಶ್ರೀ । ಸ್ವಸ್ತಿದಾಯಕವಾಣಿಗೆ ॥ ೨ ॥ ನರಹರಿಪ್ರಿಯಪುತ್ರಕಾಂತೆಗೆ । ಪರಮಗುಣ ವಿಶ್ರಾಂತೆಗೆ ॥ ವರಸುಧಾಮಯವಾಣಿಗೆ ನಿಜ । ಚರಣನತ ಗೀರ್ವಾಣಿಗೆ ॥ ೩ ॥

॥ ೮೩ ॥ ರಾಗ, [ಧಾಟಿ:- ಚಂದ್ರನು ಮೂಡುವನಿದಾ ।] ಏಕತಾಳ

ಮಾಡಿರೆ ಆರತಿಗಳಾ । ಮಾರನಪಿತನಿಗೆ ॥ ಪ ॥ ಮಾಡಿರೆ ಆರತಿಯು । ಮೋಹನ ಶ್ರೀಕೃಷ್ಣನಿಗೆ ॥ ನಾರಿಯರ ಶೀರೆಗಳ । ಸೆಳೆದು ಮರವನೇರಿದಗೆ ॥ ॥ ಅನುಪಲ್ಲ ॥ ನಕ್ರನ ಗೆಲಿದು ಅಕ್ರೂರನಿಗೊಲಿದಗೆ ॥ ಚಕ್ರಧರನಾಗಿರುವ ವಿಕ್ರಮ ಶ್ರೀಕೃಷ್ಣನಿಗೆ ॥ ೧ ॥ ಸರ್ಪನ ಗರ್ವವನ್ನು । ಹರ್ಷದಿಂದ ಮುರಿದಗೆ ॥ ಸರ್ಪಮಣಿಯುನ್ನು ತಂದು । ಸಮರ್ಪಿಸಿದವನಿಗೆ ॥ ೨ ॥ ನರಸಿಂಹ ಮೂರುತಿಯು । ಸ್ಮರಣೆಯು ಸ್ಮರಿಸುತ ॥ ಅರಸಿಯುರೆದುರಲ್ಲಿ । ಸರಸಿಜ ನಾಭನಿಗೆ ॥ ೩ ॥ ಗೋಕುಲದಲ್ಲಿ ಹುಟ್ಟಿ । ಗೋವುಗಳ ಕ್ಯಾದವಗೆ ॥ ಲೋಕ ಹದಿನಾಲ್ಕನು । ಬಾಯಿಯುಲ್ಲಿ ತೋರ್ದವಗೆ ॥ ೪ ॥ ಅಷ್ಟಮ ಸ್ತ್ರೀಯರು ಕೂಡಿ । ಜಲಕ್ರೀಡೆಯಾಡಿದಗೆ ॥ ಭಕ್ತವತ್ಸಲ ಸಿರಿ । ಪುರಂದರ ವಿಠಲಗೆ ॥ ೫ ॥

॥ ೮೪ ॥ ರಾಗ, [ಧಾಟಿ:- ಚಿತ್ತಜನಯ್ಯ ಶ್ರೀ ಚಿತ್ರಕೇಶವಗೆ] ಏಕತಾಳ

ಕಾಶಿ ಪೀತಾಂಬರ ಕೈಯಲ್ಲಿ ಕೊಳಲು । ಪೂಸಿದ ಶ್ರೀ ಗಂಧ ಪರಿಮಳವು । ಲೇಸಾಗಿ ಪದ್ಮಹಾವಿಗೆಯುನ್ನು ಧರಿಸಿದ । ವಾಸುದೇವನಿಗೂ । ವನಿತೆ ಶ್ರೀಲಕ್ಷ್ಮಿಗೂ ॥ ಬಾಸಿಂಗದಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಕಾಲಲ್ಲಿ ಕಿರುಗೆಜ್ಜೆ ನೀಲದ ಬಾವುಲಿ । ನೀಲವರ್ಣದ ನಾಣ್ಯಗಳ್ಹಾಕುವ ನಮ್ಮ । ಭಾವಜನೈಯ್ಯ ಶ್ರೀಬಾಲಗೋಪಾಲಗೆ । ನೀಲವರ್ಣನಿಗೂ ವನಿತೆ ಶ್ರೀಲಕ್ಷ್ಮಿಗೂ ॥ ನೀಲದಾರತಿಯಾ ಬೆಳಗೀರೆ ॥ ಶೋ ॥ ೨ ॥ ಕುಂಕುಮ ಕಸ್ತೂರಿ ಪರಿಪರಿ ನಾಮ । ಶಂಖಚಕ್ರವನ್ನೆ ಧರಿಸಿದ ನಮ್ಮ ॥ ಬಿಂಕದಿಂದಲಿ ನಾಟ್ಯವನಾಡುತಾಡುತ । ಪಂಕಜನಾಭಗೆ ವನಿತೆ ಶ್ರೀ ಲಕ್ಷ್ಮಿಗೆ ॥ ಕುಂಕುಮದಾರತಿಯಾ ಬೆಳಗೀರೆ ॥ ಶೋ ॥ ೩ ॥ ಹದಿನಾರು ಸಾವಿರ ಸ್ತ್ರೀಯರನೊಡಗೊಂಡು । ಚತುರಂಗ ಪಗಡೆಯನಾಡಿದ ನಮ್ಮ ॥ ಮದನ ಮೋಹನ ದೇವ ಎದೆಯುಲಿ ಕೌಸ್ತುಭ । ಮಧುಸೂದನನಿಗೂ ವನಿತೆ ಶ್ರೀ ಲಕ್ಷ್ಮಿಗೂ ॥ ಸುದತಿಯುರಾರತಿಯುಾ ಬೆಳಗೀರೆ । ಶೋ ॥ ೪ ॥ ತೆತ್ತಿಸಕೋಟಿ ದೇವರ್ಕಳನೊಡಗೊಂಡು । ಹತ್ತಾವತಾರದೋಳ್ ಆಡಿದ ನಮ್ಮ ॥ ಸತ್ಯಭಾಮೆಯು ಪ್ರಿಯು ಪುರಂದರ ವಿಠಲಗೆ । ನಿತ್ಯೋತ್ತಮನಿಗೆ ವನಿತೆ ಶ್ರೀ ಲಕ್ಷ್ಮಿಗೆ ॥ ಮುತ್ತಿನಾರತಿಯು ಬೆಳಗೀರೆ ॥ ಶೋ ॥ ೫ ॥ ಶ್ರೀ ॥

॥ ೮೫ ॥ ರಾಗ, ಅಸಾವೇರಿ [ಧಾಟಿ:- ಮೃದುಭಾಷಿಣಿ ಗುಣಸದನ] ಏಕತಾಳ

ಶ್ರೀರಾಮನ ಕಾಂತೆಗೆ ಮುದವೆರಸಿ । ಚಾರುತರಾಭರಣಗಳನು ಧರಿಸಿ । ನಾರಿಮಣಿಯು ಕೊಂಡಾಡುತ ಪಾಡುತ ॥ ಹೀರದಾರತಿಯಾ ಬೆಳಗೀರೆ ಶೋಭಾನೆ ॥ ೧ ॥ ಫಾಲದಿ ಸಾದಿನ ಬೊಟ್ಟವನಿಟ್ಟು । ಮೇಲಾಗಿಹ ಬಿಳಿದುಕುಲವನುಟ್ಟು । ಬಾಲನೊಡನೆ ಕುಳಿತಿಹ ಬಾಣಂತಿಗೆ । ನೀಲದಾರತಿಯಾ ಬೆಳಗೀರೆ ॥ ಶೋ ॥ ೨ ॥ ಬಳಕುತ್ತಿಹ ಬಡನಡುವಿನವಳಿಗೆ । ವಿಲಸಚ್ಛಾರದ ಶಶಿಸನ್ಮುಖಿಗ ॥ ಬಳುಕಾಗಿಹ ಕೆನ್ನೆಗಳುಳ್ಳವಳಿಗೆ ಕಲಶದಾರತಿಯಾ ಬೆಳಗೀರೆ ॥ ಶೋಭಾನೆ ॥೩॥ ಮತ್ತಕಾಶಿನಿ ಮಣಿಗುತ್ತಮಗುಣಿಗೆ । ಚಿತ್ತಜವಾರಣ ಮತ್ತಗಮನೆಗೆ ॥ ಚಿತ್ತಜರೂಪನ ಪುತ್ತ್ರ ಬಾಣಂತಿಗೆ । ಮುತ್ತಿನಾರತಿಯಾ ಬೆಳಗೀರೆ ॥ ಶೋಭಾನೆ ॥ ೪ ॥ ಕನ್ಯಗೆ ಕಮಲಜಭವ ವಂದಿತೆಗೆ । ಕಿನ್ನರ ಸುರವರ ಮುನಿಸೇವಿತೆಗೆ ॥ ಸನ್ನುತ ಜಯ ನರಸಿಂಹನ ಕಾಂತಗೆ । ಚಿನ್ನದಾರತಿಯಾ ಬೆಳಗೀರೆ ॥ ಶೋಭಾನೆ ॥ ೫ ॥

॥ ೮೬ ॥ ರಾಗ, ಜಂಜೋಟಿ [ಧಾಟಿ:- ಸೋಡಿ ಹಾತ ಕೃಷ್ಣ ವ.ಲಾ] ರೂಪಕತಾಳ

ಶಾರದಾಂಬೆ ಸುಂದರತರ । ಸಾರಸಾಭನೇತ್ರೆಯೇ ॥ ಪಲ್ಲ ॥ ಮಾರಜನನಿ ಮೋಹನಾಂಗಿ । ರತ್ನದಾರತಿ ಬೆಳಗಿರೆ ॥ ಅನುಪಲ್ಲ ॥ ನೊಸಲಿನೊಳಗೆ ಮಿಸುಪ ತಿಲಕ । ವೆಸಗಿ ಮೋಹದಿಂದಲಿ ॥ ಬಿಸರುಹಾಸ್ಯ ಶಶಿಸಮಾನ । ಚಂದದಾರತಿ ಬೆಳಗಿರೆ ॥ ೧ ॥ ಮಿಸುಪಯೊಡವೆಗಳನು ಧರಿಸಿ । ಭಿಸಜವಾಣಿ ಸತಿಯರು ॥ ಪಸರಿಸುತಲೆ ನೋಡುತಿಹರು । ಮುತ್ತಿನಾರತಿ ಬೆಳಗಿರೆ ॥ ೨ ॥ ನಂಬಿದವರ ಮಾತಿನೊಳಗೆ । ತುಂಬಿ ಸುಧಾರಸವನು ॥ ಇಂಬಿನಿಂದ ಪೋಷಿಸುವಳೆ । ಹವಳದಾರತಿ ಬೆಳಗಿರೆ ॥ ೩ ॥

॥ ೮೭ ॥ ರಾಗ, ಸುರಟಿ [ಧಾಟಿ- ಸಾಕು ಸಾಕು ಮನ ಜ] ರೂಪಕತಾಳ

ಮಂಗಳಾರತಿಯ ಮಾಡಿರೆ । ಅಂಗನೇಯರು ಜಯ ॥ ಪಲ್ಲ ॥ ವಾರಿಚರಿಸಿ ಭಾರ ವಹಿಸಿ । ಧಾರುಣಿಯ ಸುರನ ಗೆಲಿದು ॥ ಬಾಲನನ್ನು ಸಲಹಿದಂಥ । ನಾರಸಿಂಹಗೆ ನಮಿಸಿ ಬೇಗ ॥ ಮಂಗಳಾ ॥ ೧ ॥ ಬಾಲನಾಗಿ ಭೂಮಿ ಬೇಡಿ । ಧೀರ ಬಲಿಯು ಶಿರವ ತುಳಿದು ॥ ವೀರ ಕ್ಷತ್ರಿಯರನು ಗೆಲಿದ । ಮಾರ ಮೋಹನಾಂಗಗೀಗ ॥ ಮಂಗಳ ॥ ೨ ॥ ರಾಮಕೃಷ್ಣರೆನಿಸಿ ಭಕ್ತಸ್ತೋಮವನು ಸಲಹಿ ತ್ರಿಪುರ ॥ ಕಾಮಿನಿಯರ ವ್ರತವನಳಿದು । ಯೇರಿದಶ್ವವ ನಾರಸಿಂಹಗೆ ॥ ಮಂಗಳಾರತಿಯಾ ॥ ೩ ॥

॥ ೮೮ ॥ ರಾಗ, [ಧಾಟಿ,-ಚಿತ್ತಜನ್ಯೆಯ್ಯ ಶ್ರೀ ಚಿತ್ರಕೇಶವಗೆ] ತಾಳ

ಮಂಗಳಮಹಿಮ ಶ್ರೀರಂಗಧಾಮನಿಗೆ । ತುಂಗವಿಕ್ರಮ ವಿಹಂಗ ವಾಹನನಿಗೆ । ಅಂಗಜಜನಕ ಭುಜಂಗಶಯನನಿಗೆ । ಸಂಗರಹಿತ ಕಾಳಿಂಗ ಮರ್ದನನಿಗೆ ॥ ಮಂಗಳಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಪೀತ ವಸನ ನೀಲಮೇಘಾಂಗನಿಗೆ । ಮಾತುಳವೈರಿಗೆ ಮಧುಸೂದನಗೆ ॥ ಸೂತ ಶೌನಕಮುನಿ ವ್ರಾತನಿಗೆ । ಶ್ವೇತವಾಹನನಾದ ಗೋವಿಂದರಾಯುಗೆ॥ ನೂತನ ದಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ಜಲಚರ ಕೂರ್ಮಗೆ ವರಹ ನರಹರಿಗೆ । ಬಲುಗರ್ವಹರ ಭಾರ್ಗವ ರಘುವರಗೆ । ಬಲರಾಮ ಕೃಷ್ಣಗೆ ಬೌದ್ಧಕಲ್ಕ್ಯಗೆ । ಇಳೆಯೊಳುತ್ತಮ ವೇಣುಪುರ ನರಸಿಂಹಗೆ ॥ ಕಲಶ ದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೮೯ ॥ ರಾಗ, [ಧಾಟಿ:- ಮೃದುಭಾಷಿಣಿ ಗುಣಸದನ ಪ್ರವೀಣೆ] ತಾಳ

ಪರಮ ಸುಮಂಗಳ ಮೂರುತಿಗೆ । ಸುರಪ ಮುಖ್ಯಾಮರಸನ್ನುತೆಗೆ ॥ ಪರಕಂಧರೆಗೆ ದಯಸಾಗರೆಗೆ । ಮಿರುಪಾಂಗಿಗೆ ನವಮಣಿ ಭೂಷಣೆಗೆ ॥ ಮೆರೆವ ಕಾವೇರದ್ವಿಜನ ಕುಮಾರಿಗೆ । ಕುರುಜಿನಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಎಸೆವಾ ಪೂರ್ಣೇಂದುವದನೆಗೆ । ಪೊಸ ಕುಂದ ಕುಟ್ಮಲ ರದನೆಗೆ ॥ ಋಷಿಕುಲತಿಲಕಗಸ್ತ್ಯನ ಪ್ರಿಯೆಗೆ। ಕುಸುಮಗಂಧಿಗೆ ಕೋಮಲ ರೂಪಿಣಿಗೆ ॥ ಬಿಸಜಾಕ್ಷಗೆ ಮೂಲೋಕ ಪಾವನೆಗೆ । ಮಿಸುನಿಯಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ಪದ್ಮಕಲಶ ಧಾರಿಣಿಗೇ । ಪದ್ಮಕೋರಕ ಕುಚಯುಗೆಗೆ ॥ ಪದ್ಮಾಸಿನಿಗೆ ಪರಮೇಶ್ವರಿಗೆ । ಪದ್ಮಸಖಾಮಿತ ತೇಜೋ ಮಯಿಗೆ ॥ ಪದ್ಮಜೆಕುಂಡಿಕೆಯೊಳು ನೆಲಸಿದ ಶ್ರೀ।ಪದ್ಮಿನಿಯಾರತಿಯಾ ಬೆಳ ಗೀರೆ ॥ ಶೋಭಾನೆ ॥ ೩ ॥ ಶೃಂಗಾರ ಮಾಯೆಗೆ ಚಿನ್ಮಯಿಗೆ । ಸಂಗೀತ ಪ್ರಿಯೆಗೆ ನಿಧೇಯೆಗೆ ॥ ಗಂಗಾಮುಖ್ಯ ಕೀರ್ತಾಸ್ಪದೆಗೆ । ಶೃಂಗಮುನೀಶ್ವರ ವಂದಿತಪದೆಗೆ । ಅಂಗನೆಯರು ಅತಿಭಕ್ತಿಯಿಂದಲಿ ಜಯ । ಮಂಗಳಾರತಿ ಯಾ ಬೆಳಗೀರೆ ॥ ಶೋಭಾನೆ ॥ ೪ ॥ ಸಕಲ ಸೌಭಾಗ್ಯಧಾರಿಣಿಗೆ । ನಿಖಿಳ ಪಾತಕ ಪರಿಹರೆಗೇ ॥ ಮುಕುರ ಕಪೋಲೆಗೆ ಮುನಿಪಾಲಿನಿಗೇ । ಸುಕೃತ ನಿಧಿಗೆ ಸಂಶಯ ವಿರಹಿತೆಗೆ ॥ ಶಕಟಮರ್ದನ ಮಧ್ವಪತಿ ಕೃಷ್ಣಪ್ರಿಯೆಗೆ । ಸುಕರೆಗಾರತಿಯಾ ಬೆಳಗಿರೇ ॥ ಶೋಭಾನೆ ॥ ೫ ॥

॥ ೯೦ ॥ ರಾಗ, ಸಾವೇರಿ [ಧಾಟಿ:- ರಂಗನ ಪರಿಣಯ ಐದನೆ ದಿವಸದಿ] ಅಷ್ಟತಾಳ

ಶರದಿಂದು ಮುಖಿಯರೊಂದಾಗಿ ಮಂಟಪದಿ ಸು । ಸ್ವರದಿ ಶೋಭನವೆನ್ನುತಾ । ಮುತ್ತಿನಾಕ್ಷತೆ । ಕರದೊಳು ಪಿಡಿದು ಮತ್ತಾ । ಬರುತಲಿ ವಧು । ವರರ ಫಣೆಯೊಳಿಡುತಾ । ಪುರುಷಗೆ ತಕ್ಕ । ತರುಣಿ ಶಾಭಾಸೆನ್ನುತಾ । ವೀಳ್ಯವನು ಕೊಡುತಾ ॥ ಸ್ಮರನು ರತಿ ಸಹಿತಾಗಿ ಬಂದವ । ತರಿಸಿದರು ಸಹಜವೋ ಸದಾ ಶ್ರೀ । ಕರ ನಳಗೆ ದಮಯಂತಿ ದೇವಿಗೆ । ಧರಣಿಯೊಳು ಸರಿಗಾಣೆವೆನ್ನುತ ॥ ಹರಳಿನಾರತಿಯಾ ಬೆಳಗೀರೆ ॥ ಶೋಭಾನೇ ॥ ॥ ೧ ॥ ಮಂದಹಾಸದೊಳತಿ ಕುಂದ ಮಲ್ಲಿಗೆಯ ಪೂ । ವೆಂದು ತೋರುವ ಚಲುವಿನ । ಕುಂದದ ಮೊಗ್ಗ । ಯಂದದಿ ಕಿರುಹಲ್ಲಿನ । ಕಾಂತಿಯ ಪ್ರಭೆ । ಯಂದವಾಗಿರುವುದೇ ನಾ । ಬಣ್ಣಿಸುವೆನದ ನಂ । ಕುಂದು ಹೆಚ್ಚನು ಕಾಣೆ ಸತಿ ಪತಿ । ಗೆಂದಧಿಕ ತೋಷದಲಿ ಗುಣವನು । ಮಂದಗಾಮಿನಿಯುವರು ನಲಿದೊಲ । ಏಂದ ಮದುಮಕ್ಕಳನು ನೋಡುತ । ಕುಂದ ದಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ಬಾಳಕೊಪ್ಪುವ ಚಂದ್ರರೇಖೆ ಕಾಮಿನಿಯುಕ । ಪೋಲ ಕಾಮನ ಕನ್ನಡಿ । ಬಣ್ಣದ ನೋಡೆ ॥ ನೀಲಕುಂತಳದ ಮೋಡಿ। ಕಂಡುದ ಪೇಳಿ । ಕೇಳಿ ನಾಚುವದಾರಡೀ । ಸಟೆಯೆನ್ನ ಬೇಡಿ ॥ ಕಾಳಸರ್ಪ ವಿಶಾಲ ಸೋಲ್ಮುಡಿ । ತೋಳಿನಲಿ ಕೈವಿಡಿದ ಪುರುಷಗೆ । ಮೂಳವಿಸಿ ಚಿರಕಾಲ ಸುಖದಲಿ । ಬಾಳಿರಲಿ ದಂಪತಿಗಳೆನ್ನುತ ॥ ನೀಲದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೯೧ ॥ ರಾಗ, ಕಾಂಬೋಧಿ [ಧಾಟಿ:- ರಾಜಿಪ ಮಣಿಮಯ ರತ್ನ] ಏಕತಾಳ

ವಸುದೇವ ದೇವಕಿ ನಂದನಂದನಿಗೆ। ಮತ್ಸ್ಯಗೆ ಕೂರ್ಮಗೆ ವರಹಾವತಾರಗೆ ॥ ಉತ್ಸವಮೂರುತಿ ನರಸಿಂಹನಿಗೇ । ದಾನವ ಬೇಡಿದ ವಾಮನರೂಪಗೆ ॥ ಮುತ್ತಿನಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಉಕ್ಕಿನ ಕೊಡಲಿಯ ಪಿಡಿದ ದೇವನಿಗೆ । ರಕ್ಕಸರನು ಸಂಹಾರ ಮಾಡಿದಗೆ ॥ ಸೊಕ್ಕಿದ ಕಂಸನ ವಧೆಯ ಮಾಡಿದಗೆ । ಮುತ್ತೈದೆಯರೆಲ್ಲ ನೆರೆದು ಕೃಷ್ಣಯ್ಯಗೆ ॥ ಉತ್ತಮದಾರತಿಯಾ ಬೆಳಗೀರೆ ॥ ಶೋ ॥ ೨ ॥ ಬೌದ್ಧಾವತಾರಗೆ ಕಲ್ಕ್ಯರೂಪನಿಗೆ । ಶಂಖಚಕ್ರವ ತೋಳ್ಗಳಲಿ ಪಿಡಿದಗೆ ॥ ಬಿಂಕದಿ ಲಕ್ಷ್ಮಿಯ ತೊಡೆಮೇಲ್ಕುಳ್ಳಿರಿಸಿದ । ಪಂಕಜನಾಭ ಶ್ರೀ ಪುರಂದರ ವಿರಲಗೆ ॥ ಕುಂಕಮದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೯೨ ॥ ರಾಗ, [ಧಾಟಿ:- ದಂಪತಿಗಳ ಶೃಂಗರಿಸಿ] ತಾಳ

ಮದುವಣಿಗರನಲಂಕರಿಸಿ । ಸದಮಲ ವಸ್ತ್ರವನುಡಿಸಿ ॥ ವಿಧವಿಧ ಸಾಭರಣಂಗಳ ತೊಡಿಸಿ । ಉದಯದ ಮಂಟಪದಲಿ ಕುಳ್ಳಿರಿಸಿ ॥ ಮದನ ಜನಕ ಮಧುಸೂದನ ಲಕ್ಷ್ಮಿಗೆ । ಮುದದಿಂದಾರತಿಯಾ ಬೆಳಗಿದರೂ ॥ ಶೋಭಾನೆ ॥ ೧ ॥ ಬಾರೋ ನಮ್ಮಯ ಕುಲೋದ್ಧಾರಾ । ಮಾರಜನಕ ಶ್ರೀಯದುವೀರ ॥ ನೀರಜಸಂಭವ ವಿನುತ ಉದಾರಾ । ಪಾರಗಾಣಿಸು ಅಘ ದುರಿತವ ದೂರಾ ॥ ವಾರಿಜನಯನೆ ಯಶೋದೆಯು ಕರೆದಳು । ಬಾರೋ ಬಾರೆಂದೂ ಹಸೆಗೆನುತಾ ॥ ಶೋಭಾನೆ ॥ ೨ ॥ ಕಡಗಕಂಕಣ ಝಳಪಿಸುತ । ನಡದಿ ರುಕ್ಮಿಣಿಯು ಸಮೇತಾ ॥ ಬೆಡಗಿನ ವಾದ್ಯವಿನೋದಂಗಳಲಿ । ಸುದತಿಯರ್ ಪಾಡುವ ಗೀತಂಗಳಲಿ ॥ ದೃಢಮಂತ್ರದ ಘೋಷದಿ ವಿಬುಧರು । ವೃಢಕೇಶವನನು ಕರೆದರು ॥ ಶೋಭಾನೆ ॥ ೩ ॥ ಮುತ್ತಿನ ಸರ ಪದಕವನು । ವೊತ್ತ ತುಳಸೀಮಾಲೆಯನು ॥ ಮತ್ತೆ ಹೊನ್ನುಂಗುರ ಬೆರಳೊಳು ಒಪ್ಪುವ । ಯುಕ್ತ ಲಲಾಟದಿ ಕಸ್ತುರಿ ತಿಲಕವ ॥ ಸ್ನಿಟ್ಟು ಸಮೇತದಿ ಕೃಷ್ಣ ರುಗ್ಮಿಣಿಗೆ । ಮುತ್ತಿನಾರತಿಯಾ ಬೆಳಗಿದರೂ । ಶೋಭಾನೆ ॥ ॥ ೪ ॥ ಶಂಖ ಚಕ್ರಾಂಕಿತಧಾರಾ । ಬಿಂಕದ ಜನರಿಗಾಧಾರಾ ॥ ಪಂಕಜನಯನ ಮುಖಾಂಕಿತ ತೋರಾ । ಸಂಕರುಷಣ ಪ್ರದ್ಯುಮ್ನ ಉದಾರಾ । ಸಂಕಟಹರಣನೆ ವೆಂಕಟ ರಮಣನೆ । ಶಂಕೆಮಾಡದೆ ನೀ ದಯದೋರು ॥ ಶೋಭಾನೆ ॥ ೫ ॥ ಬಾರೇ ಸೌಭಾಗ್ಯದ ನಿಧಿಯೇ । ವಾರಿಜನಾಭನರಸಿಯೇ ॥ ದಯದೋರುತ ಸಲಹೈ ನಮ್ಮೆಲ್ಲರನು । ಭಾರಿ ದರಿದ್ರವ ದೂರ ಮಾಡುತಲೀ ॥ ಅಪಾರ ಐಶ್ವರ್ಯದ ಸುಖವ ಕೊಡುತಲಿ । ಉದ್ಧಾರ ಮಾಡಮ್ಮಾ ಲಕ್ಷ್ಮೀದೇವಿ ॥ ಶೋಭಾನೆ ॥ ೬ ॥ ಮಂಗಳಮಹಿಮ ವಿಗ್ರಹಗೆ । ತುಂಗವಿಕ್ರಮ ಸತ್ಯಭಾಮೆಗೆ ॥ ಭಂಗಾರದ ಸರಿ ಅಂಗವುಳ್ಳವಳಿಗೆ । ರಂಗನಾಥ ಶ್ರೀಕೃಷ್ಣ ರುಗ್ಮಿಣಿಗೆ । ಹಿಂಗದೆ ಭಜಿಪೆನುತ್ತುಂಗ ರಮೇಶಗೆ । ಮಂಗಳಾರತಿಯಾ ಬೆಳಗಿದರ ॥ ಶೋಭಾನೆ ॥ ೭ ॥

॥ ೯೩ ॥ ರಾಗ, [ಧಾಟಿ – ಕಾತಿ ಪೀತಾಂಬರ ಕೈಯಲ್ಲಿ ಕೊಳಲು] ಅಷ್ಟತಾಳ

ಶ್ರೀಗೌರಿಪತಿಗೆ ಗಣನಾಥನ ಪಿತಗೆ । ಯೋಗಮೂರುತಿಗೆ ಮೂಲೋಕ ವಂದಿತಗೆ ॥ ನಾಗಭೂಷಣ ಕೃಪಾಸಾಗರ ಮೂರ್ತಿಗೆ । ಸಾಗರ ಶಯನನ ಪ್ರೀತಗೆ ನಿಜಗುಣ ॥ ಯೋಗಿ ಜನರ ಕೃತಯಾಗ ಸುಪ್ರೀತಗೆ । ಬೇಗ ಮಾಣಿಕನವರತ್ನಮಾಲಿಕೆಗಳ ॥ ಯೋಗದಾರತಿಯಾ ಬೆಳಗಿ

ದರು ಶೋಭಾನೆ ॥ ೧ ॥ ಚಂದ್ರಶೇಖರಗೆ ಸುರೇಂದ್ರ ವಂದಿತಗೆ । ಚಂದಿರಾನನೆ ಪಾರ್ವತಾಂಬಿಕೆ ವರಗೆ ॥ ಚಂದ್ರಾರ್ಕ ಕೋಟಿ ಕಿರಣ ಶೋಭಿತನಿಗೆ । ಸುಂದರಮೂರ್ತಿ ತ್ರಿನೇತ್ರಗೆ ಸುರಮುನಿ ॥ ವಂದಿತ ಶಂಕರ ಷೋಡಶ ಕರನಿಗೆ । ಕುಂದರದನಗೇ ಸುಮಗಳನರ್ಚಿಸಿ ॥ ಕುಂದಣದಾರತಿಯಾ ಬೆಳ ಗಿದರು । ಶೋಭಾನೆ ॥ ೨ । ಹರಿಮೃದಂಗವ ಪಿಡಿದಿರಲು ತತ್ಸುತನು । ಕರದಿ ತಾಳವ ಧರಿಸಲು ವಾಣಿ ತಾನು॥ ಕರದೊಳು ವೀಣೆಯ ಧರಿಸುತ ನುಡಿಸಲು। ಶಿರಿಯುಮೆಯರು ಶೋಭನವ ಪಾಡಲು ॥ ಪುರುಹೂತ ಕೊಳಲನು ಊದಲು ದಿವಿಜರು । ನೆರೆಯುತ ಜಯ ಜಯವೆನುತಿರಲಾಗಲೆ ॥ ಕುರುಜಿನಾರತಿಯಾ ಬೆಳಗಿದರು । ಶೋಭಾನೆ ॥ ೩ ॥ ಮಂಗಲಂ ಮಹಿಮಗೆ ಅಂಗಜಾಂತಕಗೆ । ಗಂಗೆಯಧರ ಮಹ ಲಿಂಗ ಶಂಕರಗೆ ॥ ತುಂಗವಿಕ್ರಮ ಭಸಿತಾಂಗ ಮಹೇಶಗೆ । ಮಂಗಳ ಮೂರ್ತಿ ಕೆದುಪುರವರದಗೆ ॥ ಶೃಂಗರದಿಂದಲಿ ಬಹುವಿಧ ಸುಮಗಳ । ಸಾಂಗದೊಳರ್ಚಿಸಿ ಪೂಜಿಸಿ ದಿವಿಜರು ॥ ಮಂಗ ಳಾರತಿಯಾ ಬೆಳಗಿದರು ॥ ಶೋಭಾನೆ ॥ ೪ ॥

॥ ೯೪ ॥ ರಾಗ, [ಧಾಟಿ - ನಂದಗೋಕುಲದೊಳಗೆ । ಆಡುವ] ತಾಳ

ಕಾರುಣ್ಯಮೂರುತಿಗೆ । ಪಾಂಡು ಕು । ಮಾರನ ಸಾರಥಿಗೆ ॥ ವೇದ ವೇದ್ಯಗೆ ಯದುಕುಲ ತಿಲಕಗೆ । ಭೂರಿ ವೈಭವಗೆ ಶ್ರೀರಾಮ ಜಾನಕಿಗೆ । ವಾರಿಜದಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ದಕ್ಷಮಾರನ ಸುತಗೆ । ದ್ರೌಪದಿ । ಗಕ್ಷಯನಿತ್ತವಗೆ ॥ ಯಕ್ಷಸೂರ್ಯಗೆ ಯದುಕುಲತಿಲಕಗೆ । ಮೋಕ್ಷದಾಯಕಗೆ ಶ್ರೀರಾಮಜಾನಕಿಗೆ ॥ ಅಕ್ಷಯದಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ಪೂತನಿಬಂಧನಿಗೆ । ಅಸುರನ । ಘಾತಿಸಿ ಕೊಂದನಿಗೆ ॥ ಮಾರುತಿವಂದ್ಯಗೆ ಮದನನ ಪಡೆದಗೆ । ಸೇತುವೈಭವಗೆ ಶ್ರೀರಾಮಜಾನಕಿಗೆ॥ ಉತ್ತಮದಾರತಿಯಾ ಬೆಳಗೀರೆ॥ ಶೋಭಾನೆ ॥೩॥ ವರಸಿಂಗಪುರದೊಳಗೆ । ತಾ ಬಂದು । ಲೀಲೆಯ ತೋರಿದಗೆ ॥ ಪರಮ ಭಕ್ತರಿಗೆಲ್ಲ ಒಲಿದು ಇಷ್ಟವ ನೀಡಿ । ಬಿಡದೆ ಪಾಲಿಪ ಹರಿರಾಮ ಜಾನಕಿಗೆ ॥ ಮರಕತದಾರತಿಯಾ ಬೆಳ ಗೀರೆ ॥ ಶೋಭಾನೆ॥ ೪ ॥ ಪುಂಡರಿಕಾಕ್ಷನಿಗೆ । ಬಾಯೊಳು ಬ್ರ । ಹ್ಮಾಂಡವ ತೋರಿದಗೆ ; ಅಂಗ್ರೈಯೊಳಗೆ ಗಂಗೆಯ ಪಡೆದಗೆ । ಚಂಡ ವಿಕ್ರಮಗೆ ಶ್ರೀ ರಾಮಜಾನಕಿಗೆ ॥ ಮಂಗಳದಾರತಿಯಾ ಬೆಳಗೀರೆ ॥ ಶೋಭಾನೆ ॥ ೫ ॥

॥ ೯೫ ॥ ರಾಗ, [ಧಾಟಿ:- ಶೋಭನಪದ ] ತ್ರಿಪುಟತಾಳ

ಸೃಷ್ಟಿಯಲಿ ಕಡುದುಷ್ಟ ರಾವಣ । ಕಟ್ಟಳೆಯ ಕಂಗೆಡಿಸಲು ॥ ಅಷ್ಟರೊಳು ಭಯಪಟ್ಟು ದಿವಿಜರು । ಮಟ್ಟುಗೂಡುತ ಸ್ತುತಿಸಲು ॥ ಥಟ್ಟನೇ ದಯವಿಟ್ಟು ದಶರಥ । ಪಟ್ಟಮಹಿಷಿಯೊಳುದಿಸಲು ॥ ಧಿಟ್ಟಕೌಶಿಕ । ನಿಷ್ಟಿಯನು ಕೈ । ಗೊಟ್ಟು ಸಲಹಿದ । ಶ್ರೇಷ್ಠ ದನುಜಘ್ನ । ರಟ್ಟಗಾರತಿಯಾ ಬೆಳಗಿದರು ॥ ಶೋಭಾನೆ । ೧ ॥ ಹಾದಿಯೊಳು ಶಿಲೆಯಾದಹಲ್ಯೆಯ । ಪಾದರಜದಿಂ ಪೊರೆಯುತ ॥ ಸಾಧಿಸಿದ ಧನು ಭೇದಿಸುತ ಹಿತ । ಳಾದ ಸೀತೆಯ ಮಲಿಸುತ ॥ ಕ್ರೋಧದಿಂದೆದುರಾದ ಪರಶುವ । ನಾದಯಾನಿಧಿ ಗೆಲ್ಲುತ ॥ ಸಾಧುಮಾರ್ಗವಿ । ನೋದ ಸೀತಾಹ್ಲಾದ ಪಾಪವಿರೋಧ ದಾನವ ॥ ಸೂದನಗಾರತಿಯಾ ಬೆಳಗಿದರು ॥ ಶೋಭಾನೆ ॥ ೨ ॥ ಚಿಕ್ಕತಾಯಿಯ ಸೊಕ್ಕಿನುಡಿಗತಿ । ಸೌಖ್ಯವನು ಹೋಗಾಡುತ ॥ ಘಕ್ಕನನುಜನ ಸತಿಯಳನ್ನು । ಸೌಖ್ಯದಿಂದೊಡಗೂಡುತ ॥ ಮಕ್ಕಣಿಸುವರಶಕ್ಯವಾದ ವ । ನಕ್ಕೆ ತಾ ಸಂಚರಿಸುತ ॥ ಮಿಕ್ಕಿ ಬಂದಾ ರಕ್ಕಸಿಯ ಕುಚ । ಡಿಕ್ಕೆಲವ ಖಂಡಿಸಿದ ಪ್ರಭುಗೆ ಮಾ ॥ ಣಿಕ್ಯದಾರತಿಯ ಬೆಳಗಿದರು ॥ ॥ ೩ ॥ ಧೂರ್ತಖರ ತ್ರಿಶಿರಾದಿ ದಾನವ । ಮೊತ್ತವನು ಸಂಹರಿಸುತ ॥ ದೈತ್ಯಮಾಯಾ ಮೃತ್ತಿಮೃಗವನು । ಮತ್ತಕಾಶಿನಿ ಬೇಡುತ ॥ ಸತ್ವನಿಧಿ ಬೆನ್ನತ್ತೆ ಸೀತೆಯ । ದೈತ್ಯಪತಿ ಕೊಂಡೋಡುತ ॥ ಮತ್ತೆ ಕಾಣದೆ ಕೋಪದಿಂದರ । ಸುತ್ತ ಬಂದ ಮಹಾತ್ಮ ರಾಮಗೆ ॥ ಮುತ್ತಿನಾರತಿಯಾ ಬೆಳಗಿದರು ॥ ಶೋ ॥ ೪ ॥ ತೋಯಜಾಕ್ಷಿಯ ಸುದ್ದಿಪೇಳ್ದ ಜ । ಟಾಯುವಿಗೆ ಗತಿ ತೋರುತ ॥ ವಾಯುತನುಜ ಸಹಾಯದಿಂ ಕಪಿ । ರಾಯಸಖ್ಯವ ಮಾಡುತ ॥ ನ್ಯಾಯಗರ್ಭಿತ ಸಾಯಕದಿ ಮಹಾ । ಕಾಯ ವಾಲಿಯ ಕೊಲ್ಲುತ ॥ ಪ್ರಾಯಶದಿ ಗಿರಿಯೊಡ್ಡಿ ಶರಧಿಗು । ಪಾಯದಿಂ ಬಂಧಿಸಿದ ಜಾನಕಿ ॥ ಪ್ರೀಯಗಾರತಿಯಾ ಬೆಳಗಿದರು ॥ ಶೋ ॥ ೫ ॥ ಮನವಿವೇಕವ ನೆನೆದುಬಂದಾ । ದನುಜಪತಿ ಸೋದರನಿಗೆ ॥ ಇನಶಶಿಗಳುಳ್ಳನಕ ಲಂಕಾ । ವನಿಯ ಪಾಲಿಸುತಾ ಮಿಗೆ ॥ ರಣದಿ ರಾವಣ ಕುಂಭಕರ್ಣರ । ಹನನಗೈಯುತ ಲೋಕಕೆ ॥ ಸನುಮತದಿ ಪಾವಕನ ಮುಖದಿಂ । ದನಘೆಶೀತೆಯ ವಿನಯಗೈದಗೆ ॥ ಕನಕದಾರತಿಯಾ ಬೆಳಗಿದರು ॥ ಶೋ ॥ ೬ ॥ ಮೇರುಗಿರಿನಿಭ ಇಂದ್ರ ಪುಷ್ಪಕ । ವೇರಿತಾ ಸಾಕೇತಕೆ ॥ ಸೇರಿ ಸಾನುಜರಿಂದ ಧರ್ಮದ । ಮೇರೆದಪ್ಪದೆ ಸುಜನಕೆ ॥ ಸಾರ ಸಂಪದ

ವಿತ್ತು ಲೋಕೋ। ದ್ಧಾರನಾಗುತ್ತಖಿಳಕೆ ॥ ನೀರಜೇಕ್ಷಣ ಕರುಣಪಾರಾ। ವಾರ ಶರಧಿಗಂಭೀರ ಲಕ್ಷ್ಮಿಯಾ। ನಾರಾಯಣರೂಪ ಜಯ ಜಯ॥ ಶೋ॥೭॥

॥ ೯೬ ॥ ರಾಗ, ಕೇತಾರ [ಧಾಟಿ:— ಮುಕ್ತಿನಾರತಿಯೆತ್ತುವೆ। ಎನ್ನ] ಏಕತಾಳ

ಸುಂದರಿಯರಾರತಿಯಾ। ಅರ। ವಿಂದಾಕ್ಷಗೆತ್ತಿದರೂ ॥ ಪಲ್ಲ ॥ ಕುಂದಶರನ ಪಿತಗಂಭೋಜ ತನುಜೆಗೆ। ಇಂದೀವರಾಕ್ಷಿಯು ರೊಲವಿಂದ ಕೂಡುತ್ತಾ ॥ ಸುಂದರಿಯು ॥ ಅನುಪಲ್ಲ ॥ ನಿತ್ಯನಿರ್ಮಲ ತನು ಸತ್ಯ ಸ್ವರೂಪಗೆ। ಭಕ್ತಾರ್ತ್ಯಾರ್ತಿಭಂಜನ ಶ್ರೀ ಮತ್ಸ್ಯರೂಪಗೆ ॥ ಸುಂದರಿಯು ॥ ೧ ॥ ಅಂಗಜಪಿತ ಭವಭಂಗ ಧುರೀಣಗೆ। ಗಂಗಾಜನಕ ದಿವ್ಯ ತುಂಗವಿಕ್ರಮಗೆ ॥ ಸುಂದರಿಯು ॥ ೨ ॥ ದಶವಿಧರೂಪಗೆ ಶಶಿಕೋಟಿ ಸುಂದರ। ಪಶುಪತಿ ಮಿತ್ರಗೆ ಪಶುಪಾಲ ಶ್ರೀಶಗೆ ॥ ೩ ॥

॥ ೯೭ ॥ ರಾಗ, ಸೌರಾಷ್ಟ್ರ [ಧಾಟಿ:- ಚಿತ್ರಜನ್ಮಯ್ಯ ಶ್ರೀಚಿತ್ರಕೇಶವಗೆ] ಆದಿತಾಳ

ಶೋಭಾನವೆನ್ನಿರೆ ಸರ್ವಜ್ಞ ಹರಿಗೆ। ಶೋಭಾನವೆನ್ನಿ ಸವಿರನ ಪಿತಗೆ ॥ ಶೋಭಾನವೆನ್ನಿ ಸರೋಜಸದನೆಯು। ಶೋಭನಕಾಯಗೆ ಶೋಭನ ದಾತಗೆ ॥ ಪದುಮದಾರತಿಯಾ ಬೆಳಗೀರೆ ॥ ಶೋಭಾನೆ ॥ ಪಲ್ಲ ॥ ಶಫರ ವೇಷದವಗೆ ಕಪಟಕಮಠಗೆ। ತಪನೀಯಾಂಬಕನ ಅಪಹರಿಸಿದಗೆ ॥ ಕೃಪಣ ಪ್ರಹ್ಲಾದನ್ನ ವಿಪದ ಕಳೆದಗೆ। ಶಿಪಿಯು ಕರದಿ ಬಲಿವಪುವ ಬಿಗಿಸಿದಗೆ ॥ ಚಪಲಾಕ್ಷಿಯರಾರತಿಯಾ ಬೆಳಗೀರೆ ॥ ಶೋಭಾನೆ ॥ ೧ ॥ ಕೊಡಲಿ ಕೋದಂಡವ ಪಿಡಿದ ಪಂಡಿತಗೆ। ಕಡಲ ಕಟ್ಟಿಸಿ ಖಳರೊಡಲ ಬಗೆದಗೆ॥ ಮಡುವಿನೊಳಗೆ ಫಣಿಪೆಡೆಯ ತುಳಿದಗೆ। ಮೃಡನ ಗೆಲಿಸಿ ಕೀರ್ತಿ ಒಡನೆ ತಂದಿತ್ತಗೆ॥ ಮಡದಿಯರಾರತಿಯಾ ಬೆಳಗೀರೆ ॥ ಶೋಭಾನೆ ॥೨॥ ಸಿರಿಗೆ ಸುರಗೆ ಪಿಡಿದರವಿಂದಾಂಬಕಗೆ। ಶರಧಿಯೊಳಾಳ್ದಗೆ ಗಿರಿಮಹೀಧರಗೆ ॥ ನರಹರಿರೂಪಗೆ ಧರಣಿಯಳೆದಗೆ। ಧುರದೊಳು ರಾಯರ ತರಿದ ಸಮರ್ಥಗೆ ॥ ಹರದೆರಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥ ದಶರಥತನಯಗೆ ವಸುದೇವಸುತಗೆ। ವಸನವಿಹೀನಗೆ ಅಸುರಭಂಜನಗೆ ॥ ಝಷಕೂರ್ಮ ರೂಪಗೆ ವಸುಧೆವಾಹಕಗೆ। ಮಿಸುಣಿಕಶ್ಯಪುವಿನ್ನೆಬ್ಬಸುರ ಬಗೆದಗೆ॥ ಶಶಿಮುಖಿಯರಾರತಿಯ ಬೆಳಗೀರೆ॥ ಶೋಭಾನೆ ॥ ೪ ॥ ವಟು ಭೃಗುರಾಮಗೆ ಜಟಿಲಮಸ್ತಕಗೆ। ಕಠಿಣ ಕಂಸನ ತಾಳಾಪಟವ ಮಾಡಿದಗೆ ॥ ನಿಟಲಾಕ್ಷ ವರದಗೆ ಕಟಕಭೀಕರಗೆ। ವಟಪತ್ರಶಯನ ನಿಷ್ಕುಟಿಲ ಜಗನ್ನಾಥ ॥ ವಿರಲಗಾರತಿಯ ಬೆಳಗೀರೆ ॥ ಶೋಭಾನೆ॥೫॥

॥ ೯೮ ॥ ರಾಗ, ಕಾಂಬೋಧಿ [ಧಾಟಿ:– ಚಿತ್ರಜನ್ಯೆಯ್ಯ ಶ್ರೀಚಿತ್ರಕೇಶವನಗೆ] ಏಕತಾಳ

ಮಂಗಳಮಹಿಮ ವಿಶ್ವೇಶ್ವರಗೆ । ಭುಜಂಗ ಭೂಶಿತ ಗಂಗಾಧರಗೆ ॥ ಅಂಗಜ ಹರಗೆ ತುಂಗ ವಿಕ್ರಮಗೆ । ಸಂಗೀತಲೋಲ ಶುಭಾಂಗ ಮಹೇಶಗೆ॥ ಮಂಗಳಾರತಿಯಾ ಬೆಳಗೀರೆ॥ ಶೋಭಾನೆ ॥ ೧ ॥ ಗಿರಿಜಾರಮಣಗೆ ಪರಶಿವಗೆ। ಕರುಣಾಕರ ಕಲ್ಯಾಣನಿಗೆ ॥ ಕರಿ ಚರ್ಮಾಂಬರ ಗಜಮುಖ ಪಿತನಿಗೆ ॥ ಪರಿಪರಿ ವಿಧದಲ್ಲಿ ಈ ಪರಿ ಬೆಳಗುವ ॥ ಕುರುಜಿನಾರತಿಯಾ ಬೆಳಗೀರೆ ॥ ಶೋಭಾನೆ । ೨ ॥ ಶಂಕರ ಸರ್ವೇಶ್ವರ ಶಿವಗೆ । ಪಂಕಜಸಂಭವ ಸುತ ಸಮ ರುಚಿಗೆ ॥ ಪಂಕಜನೇತ್ರಗೆ ಕಿಂಕರ ಸ್ತೋತ್ರಗೆ । ಓಂಕಾರದ ಶುಭಾಂಗ ಮಹೇಶಗೆ ॥ ಕುಂಕುಮದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥

॥ ೯೯ ॥ ರಾಗ, [ಧಾಟಿ.– ಹೇಗೆ ಪೋಗಲಿ ಯದುಪನಲ್ಲಿಗೆ । ಏನು] ತಾಳ

ಶ್ರೀರಂಗನಾಥಗೆ ನೋಡಿರೇ। ಜಯ । ಮಂಗಳಾರತಿ ಪಾಡಿರೇ ॥ಪಲ್ಲ॥ ಸಿಂಧುಶಯನನ ನೋಡಿರೇ । ಭುವ । ನಂದದಲಿಯೋ ಪಾಡಿರೇ ॥ ಇಂದು ವರಗಳ ಬೇಡಿರೇ । ಆನಂದದಿಂದ ಕೊಂಡಾಡಿರೇ ॥ ೧ ॥ ಮಾವರಗೆ ನಳಿನ ನಾಭಗೇ । ವಸು । ದೇವ ದೇವಕೀಜಾತಗೇ ॥ ಗೋವುಗಳ ಕಾಯ್ದಾತಗೇ । ವೃಂ । ದಾವನೊಳಿಹ ನರಪ್ರೀತಗೆ ॥ ೨ ॥ ಭಾಮೆಯರ ನೀ ಲಾಲಿಸಿ । ಸತ್ಯ । ಭಾಮೆಯನು ನೀ ಮೋಹಿಸೀ॥ ಗೋಪಿಯರ ದರ್ಪಹಾರಿ ಶ್ರೀ। ಗೋಪಾಲ ಕೃಷ್ಣನನ್ನು ಪೂಜಿಸಿ ॥ ೩ ॥

॥ ೧೦೦ ॥ ರಾಗ, [ಧಾಟಿ - ಅಂಗನೆಯರಾರತಿಯಾ। ಪಾಂಡುರಂಗನಿಗೆತ್ತಿದರು] ತಾಳ

ರಾಜಿಸುವಾರತಿಯ । ರಘು। ರಾಮಗೆ ಬೆಳಗಿದರು ॥ ಪಲ್ಲ ॥ ಇನಕುಲ ಧೀಶಗೆ । ಜನಕಜೆ ಈಶಗೆ । ಮನುಮಥನಯ್ಯನಿಗೆ ॥ ರಘುರಾಮಗೆ ಬೆಳಗಿದರು ॥ ೧ ॥ ಮುತ್ತೈದೆಯರು ಬೇಗ । ಅತಿ ಸಂಭ್ರಮದೊಳು । ಮುತ್ತಿನದಾರತಿಯಾ ॥ ರಘುರಾಮಗೆ ಬೆಳಗಿದರು ॥ ೨ ॥ ಭೂಸುರ ಪ್ರಿಯಗೆ ಅಸಮಸಾಹಸಿಗೆ । ಕುಸುಮದ ಆರತಿಯಾ ॥ ರಘುರಾಮಗೆ ಬೆಳಗಿದರು ॥ ೩ ॥ ಅತಿಶಯದಿಂದಲಿ । ರತಿ ಪತಿ ಪಿತನಿಗೆ । ರತುನದ ಆರತಿಯಾ ॥ ರಘುರಾಮಗೆ ಬೆಳಗಿದರು ॥ ೪ ॥ ಯದುಕುಲರಾಯಗೆ । ಪದುಮನಾಭನಿಗೆ । ಕುಂದಣದಾರತಿಯಾ ॥ ರಘುರಾಮಗೆ ಬೆಳಗಿದರು ॥ ॥ ೫ ॥ ಮಂದರಧರ ಅರ । ವಿಂದ ಲೋಚನಗೆ । ಸುಂದರ ವದನೆಯರು ॥ ರಘುರಾಮಗೆ ಬೆಳಗಿದರು ॥ ೬ ॥ ನಂದಗೋಪಿಯ ಕಂದ । ನಂದ ಮುಕುಂದಗೆ । ಚಂದದೊಳಾರತಿಯಾ ॥ ರಘುರಾಮಗೆ ಬೆಳಗಿದರು ॥ ೭ ॥

॥ ೧೦೧ ॥ ರಾಗ, „ಧಾಟಿ:– ಕಂಬುಕಂಧರಿ ಕಮಲನಾಭನ ಕೊರಳಿ] ಅಷ್ಟತಾಳ

ಸಾರಸಾಕ್ಷಗೆ ನಾರಿಮಣಿಯರೆ । ಆರತಿ ಬೇಗನೆ ಬೆಳಗಿರೆ ॥ ಪಲ್ಲ ॥ ಮಚ್ಛರೂಪಗೆ ಸ್ವಚ್ಛಕೂರ್ಮಗೆ । ಹೆಚ್ಚಿನಿಂದಲಿ ಬಂದ ವರಹಗೆ ॥ ಮೆಚ್ಚಿ ಕಂಬದೊಳುದಿಸಿ ಬಂದ ॥ ಅಚ್ಚುತ ನರಸಿಂಹಗೆ ॥ ಸಾರಸಾಕ್ಷಗೆ ॥ ೧ ॥ ಬಲಿಯೊಳ್ ದಾನವ ಬೇಡಿದವಗೆ । ಛಲದಿ ಕ್ಷತ್ರಿಯರ ಗೆಲಿದಗೆ ॥ ಮಾತೆಶಿರವ ನಳಿದು ಬಂದ । ಖ್ಯಾತ ಪರಶುರಾಮಗೆ ॥ ಸಾರಸಾಕ್ಷಗೆ ॥ ೨ ॥ ಋಷಿಯ ಯಾಗವ ಸಲಿಸಿ ಸೀತೆ । ಪತಿಯು ಅಸುರರ ಗೆಲಿದಗ ॥ ಅಸುರ ಕಂಸನ ಮಡುಹಿ ಗೊಲ್ಲರ । ವಸುದೇವ ದೇವಕಿ ಕೃಷ್ಣಗೆ ॥ ಸಾರಸಾಕ್ಷಗೆ ॥ ೩ ॥ ಬತ್ತಲೆಯ ನಿಂತಿದ್ದ ಬೌದ್ಧಗೆ । ಸ್ತುತ್ಯ ಕಲ್ಕ್ಯಸ್ವರೂಪಗೆ ॥ ಹತ್ತಾವತಾರದಿ ಮೆರೆಯುವ ಶ್ರೀ । ವೆಂಕಟೇಶ್ವರ ವಿಠಲಗೆ ॥ ಸಾರಸಾಕ್ಷಗೆ ॥ ೪ ॥

॥ ೧೦೨ ॥ ರಾಗ, ಸಾವೇರಿ[ಧಾಟಿ.– ಮೃದುಬಾಷಿಣಿ ಗುಣಸದನ ಪ್ರವೀಣೆ] ಏಕತಾಳ

ವಸುಮತಿಗಧಿಕವಾಗಿರುವಯೋಧ್ಯಾಪುರದಿ । ದಶರಥಭೂಪಗುದಿಸಿ ಸ್ವಯಂವರದಿ ॥ ಕುಶಲದಿ ಹರನ ಚಾಪವನೆತ್ತಿ ಲೀಲೆಯೊಳ್ । ಶಶಿಮುಖಿ ಸೀತೆಯ ವರಿಸಿದ ಧೀರಗೆ ॥ ಕುಶಲದಾರತಿಯಾ ಬೆಳಗೀರೆ ॥ ಶೋಭಾನೆ ॥೧। ತಾತನ ನುಡಿಯನು ಪಾಲಿಸಲೆಂದು । ಸೀತೆ ಸಹಿತ ಅಡವಿಗೆ ತಾ ಬಂದು ॥ ಖ್ಯಾತಿಪ ಖರದೂಷಣಮಾರೀಚರ। ಗತಿಸಿ ವಾಲಿಯ ಮಡುಹಿದ ಶ್ರೀರಾಮಗೆ॥ ನೂತನದಾರತಿಯಾ ಬೆಳಗೀರೆ ॥ ಶೋಭಾನೆ ॥ ೨ ॥ ಕುಶಿಕನಂದನನ ಯಜ್ಞವ ಕಾಯ್ದು । ಅಸುರೆತಾಟಕಿಯು ಗೋಣನೆ ತಾ ಕೊಯ್ದು ॥ ಋಷಿವರ ಗೌತಮ ರಮಣಿಯ ಶಾಪವ । ಕುಸುರಿ ಭಾರ್ಗವನ ಗೆಲಿದ ರಾಘವನಿಗೆ ॥ ಕುಸುಮದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥ ವಲಿದು ಸುಗ್ರೀವನೆಂಬನ ಸಂಗ್ರಹಿಸಿ । ಒಲು ವಿಧದಿಂದ ಶರಧಿಯನುತ್ತರಿಸಿ । ಖಳರ ಲಂಕೆಯ ಪೊಕ್ಕು ಲಲನೆಯ ಕೊಡದನ । ಕುಲವನು ತೀರ್ಚಕ ಲಲನೆಯ ರಮಣಗೆ ॥ ಜಲಜದಾರತಿಯಾ ಬೆಳಗೀರೆ ॥ ಶೋಭಾನೆ ॥ ೪ ॥ ಚಲುವ ವಿಭೀಷಣನನು ಸಂತವಿಸಿ । ಲಲನೆಯ ಉರಿಯಲಿ ಪೊಗಿಸಿಯೆ ವಲಿಸಿ ॥ ಛಲದಿಂದ ಪುಷ್ಪಕವೇರಿ ಆಯೋಧ್ಯೆಯೊಳ್ । ನಿಲಿಸಿದ ಸೀತಾ ಶ್ರೀರಘುರಾಮಗೆ ॥ ಲಲನೆಯರಾರತಿಯಾ ಬೆಳಗೀರೆ ॥ ಶೋಭಾನೆ ॥ ೫ ॥ ಅವನಿಯನಾಳಿದ ಶ್ರೀರಾಘವಗೆ । ಪವನಜ ಲಕ್ಷ್ಮಣ ಭರತನೆಂಬವರ್ಗೆ ॥ ರವಿತನಯನಿಗೆ ಶತ್ರುಘ್ನನಿಗೆ । ರಾಮನ ಹವಣಿಯೊಳಿರುವ ವನಿಜೆಗೆ ॥ ಹೂವಿನಾರತಿಯಾ ಬೆಳಗೀರೆ॥ ಶೋಭಾನೆ ॥೬॥

ಝುಣಝುಣರೆನುತಡಿಯಿಡುತಲಿ ಬೇಗ । ಘನ ಸೌರಂಭದಿ ಸತಿಯರ ಮಥ ನಾಗಾ ॥ ವಿಸಯದಿ ಸ್ವರವೆತ್ತಿ ಪಾಡುತಲಾಗಾ । ಮನದೊಲಿಯುತ ಸೀತೆಗೆ ರಾಮಗೆ ॥ ಕನಕದಾರತಿಯಾ ಬೆಳಗೀರೆ ॥ ಶೋಭಾನೆ ॥ ೭ ॥ ಅಂಬುಜೆ ಶ್ರೀಸರಸ್ವತಿಯರ ಕೂಡಿ । ತುಂಬುರ ನಾರದಗರ್ಗನವ ಪಾಡಿ ॥ ತುಂಬಿದ ಸುರಸಭೆಯಲ್ಲಿ ನಾರಿಯರತಿ । ಸಂಭ್ರಮದೊಳು ಪಾಡುತ ಶ್ರೀರಾಮಗೆ ॥ ಅಂಬುಜದಾರತಿಯಾ ಬೆಳಗೀರೆ ॥ ಶೋಭಾನೆ ॥ ೮ ॥ ಪುರದೊಳಗಿರುತಿಹ ಪರಮ ಪತಿವ್ರತ । ತರುಣಿಯರೆಲ್ಲರು ಕೂಡಿ ನಲಿಯುತ ॥ ಪರಿಪರಿ ವಿಧ ದಿಂದ ಪಾಡುತ್ತ ಪೊಗಳುತ್ತ । ಹರುಷದಿ ಸೀತೆಗೆ ಸೀತೆಯ ರಮಣಗೆ ॥ ಮೆರ ವೆಯರಾರತಿಯಾ ಬೆಳಗೀರೆ ॥ ಶೋಭಾನೆ ॥ ೯ ॥ ಮಂಗಳ ದಶರಥರಾಜ ಕುಮಾರಾ । ಮಂಗಳ ಅವನಿಯೊಳಿರುತಿರೆ ಭಾರಾ ॥ ಹಿಂಗದೆ ದುಷ್ಟರ ಸಂಹರಿಸಿಯೆ ಶ್ರೀ । ಮಂಗಳಮಹಿಮ ಭಕ್ತರ ಪೊರೆವನಿಗೆ ॥ ಮಂಗಳಾ ರತಿಯಾ ಬೆಳಗೀರೆ ॥ ಶೋಭಾನೆ ॥ ೧೦ ॥

॥ ೧೦೩ ॥ ರಾಗ, ಕಾಂಬೋಧಿ [ಧಾಟಿ:– ಚಿತ್ತಜನಯ್ಯ ಶ್ರೀಚಿತ್ರಕೇಶವಗೆ] ಏಕತಾಳ

ಮಂಗಳಾಂಗಿಯರೆಲ್ಲ ಮಂಗಳ ಮಹಿಮಗೇ । ಗಂಗಾಜನಕ ಭುಜಂಗಶಯನಗೇ ॥ ಅಂಗಜನಯ್ಯಗೆ ಭೃಂಗಕುಂತಳೆಗೆ । ನುಂಗಿದ ನಗನನ್ನು ಭಂಗಿಸಿದಾತಗೆ ॥ ಮಂಗಳಾರತಿಯಾ ಬೆಳಗೀರೆ ॥ ಶೋಭಾನೆ ॥ ॥ ೧ ॥ ವೇದವನ್ನೊಯ್ದ ವಿರೋಧಿಯಾ ಮಥಿಸುತ್ತ । ಭೂಧರ ಬೆನ್ನೊಳು ಧರಿಸಿದಗೆ ॥ ಆ ದೇವದಿವಿಜರ ಶೋಧಿಸಿ ಶುಭಕರ । ಆದಿನಾರಾಯಣನ ನೊಲಿಸಿದ ಲಕ್ಷ್ಮಿಗೆ ॥ ಮೋದದಿಂದಾರತಿಯಾ ಬೆಳಗೀರೆ॥ಶೋಭಾನೆ ॥೨॥ ಧರೆಯನ್ನೊಯ್ದನ ಕೊಂದು ತರಳನ ಪೊರೆದಂದು । ಧರಣಿ ಈರಡಿ ಮಾಡಿ ಮೆರೆದವಗೇ ॥ ಕರದೊಳು ಪದುಮವ ಧರಿಸಿ ಶ್ರೀಹರಿ ಪದವ । ನಿರತ ಸೇವಿಸುತಿರುವ ಸರಸೀರುಹಾಕ್ಷಿಗೆ ॥ ಮರತಕದಾರತಿಯಾ ಬೆಳಗೀರೆ ॥ ಶೋಭಾನೆ ॥ ೩ ॥ ಕ್ಷಿತಿಪರ ಹತಗೈದು ಕ್ಷಿತಿಜೆಯ ವನಕೈದು । ರತಿಪತಿ ಪಿತನಾಗಿ ಮೆರೆದವಗೇ ॥ ಕ್ಷಿತಿಯೊಳು ಪತಿವ್ರತಾ ಸತಿಯರ ನಿಜವ್ರತಾ। ಕತಿ ಮೋದವಡುತ ಸಂತತಿ ಭಾಗ್ಯವೀವ ರಮೆಗೆ ॥ ಸತಿಯರಾರತಿಯಾ ಬೆಳ ಗೀರೆ ॥ ಶೋಭಾನೆ ॥ ೪ ॥ ಬುದ್ಧನಾಗಿಯೆ ಖಳರ ಗೆದ್ದು ವಾಜಿಯನೇರಿ । ಬುದ್ಧನಾಗಿಯೆ ಶಾಸ್ತ್ರ ತಿದ್ದಿದನೇ ॥ ಮುದ್ದು ನೋರೆಯ ಸತಿಯ ರೆದ್ದು ಮೌಕ್ತಿಕಾಕ್ಷತೆಯ । ಮುದ್ದು ನಾರಾಯಣಗೆ ಪದ್ಮಾಸನನಿಗೆ ॥ ಪದ್ಮದಾರತಿಯಾ ಬೆಳಗೀರೆ ॥ ಶೋಭಾನೆ ॥ ೫ ॥

॥ ೧೦೪ ॥ ರಾಗ, [ಧಾಟಿ:- ಆರತಿ ಎತ್ತೀದರೂ ಶ್ರೀ ಲೋಲಗೆ ಸತಿಯರು]

ಆರತಿಯನೆತ್ತುವೆ ನಾ । ಚಕ್ರಪಾಣಿ ಶ್ರೀ ಕೃಷ್ಣನಿಗೆ ॥ ಪಲ್ಲ ॥ ನಂದ ಗೋಕುಲದಲ್ಲಿ । ಜನಿಸಿದ ಕೃಷ್ಣನಿಗೆ ॥ ಗೋವರ್ಧನ ಗಿರಿಯನೆತ್ತಿ । ಗೋವುಗಳ ಕ್ಯಾದವಗೆ ॥ ೧ ॥ ಮಾವ ಕಂಸನ ಕೊಂದು । ತಾಯಿಯಾದ ದೇವಕಿಯ ॥ ಸೆರೆಯ ಬಿಡಿಸಿದವಗೆ । ಶ್ರೀಕೃಷ್ಣ ಮೂರುತಿಗೇ ॥ ೨ ॥ ಕಾಳೀಯ ಗರ್ವವನ್ನು । ಹರುಷದಿಂದಲಿ ಮುರಿದು ॥ ನಾಗಕನ್ಯೆಯರಿಗೆ ಸೌಭಾಗ್ಯವಿತ್ತ ಹರಿ ॥ ೩ ॥ ಗೋಪಿಕಾಸ್ತ್ರೀಯರ ಸೇರಿ । ಜಲಕ್ರೀಡೆಯಾಡಿದ ಸೀರೆಗಳನಪಹರಿಸಿ । ವೃಕ್ಷವನೇರಿದ ಹರಿಗೆ ॥ ೪ ॥ ದುರುಳ ದುಶ್ಯಾಸನ । ತರುಣಿ ದ್ರೌಪದಿಗೆ ॥ ಮಾನವನ್ನು ಸುಲಿಯುವಾಗ । ಅಕ್ಷಯವಿತ್ತವಗೆ ॥ ೫ ॥

॥ ೧೦೫ ॥ [ಧಾಟಿ:- ಮಾಡಿರೆ ಆರತಿಗಳ । ಮಾರನ ಪಿತನಿಗೆ]

ಎತ್ತಿದರಾರತಿಯಾ । ಮದಗಜಗಮನೆಗೆ ॥ ಎತ್ತಿದರಾರತಿಯಾ ॥ಪಲ್ಲ॥ ಪಟ್ಟೆಶೀರೆಯನುಟ್ಟು । ಬಟ್ಟುಮುತ್ತನು ಕಟ್ಟಿ ॥ ಸುತ್ತ ನಾರಿಯರೆಲ್ಲ । ಪಾಡುತ್ತ ಪೊಗಳುತ್ತ ॥ ೧ ॥ ಚಿನ್ನದ ತಟ್ಟೆಯಲ್ಲಿ । ರನ್ನದಾರತಿಯನ್ನು ॥ ಕನ್ಯೆಯರೆಲ್ಲರು ಪಾಡುತ್ತ ಪೊಗಳುತ್ತ ॥ ೨ ॥ ಶಾಲುಗಳನು ತೊಟ್ಟು । ಸಾಲುಮುತ್ತನು ಕಟ್ಟಿ ॥ ಅರಸಿಯರೆಲ್ಲರು । ಪಾಡುತ್ತ ಪೊಗಳುತ್ತ ॥ ೩ ॥

॥ ೧೦೬ ॥ ರಾಗ [ಧಾಟಿ - ಬಾರೆ ನೀ ಬಲುಬೇಗನೇ ಹಸೆಗೆ] ತಾಳ.

ಯಾವ ಪಾಪಿ ದೃಷ್ಟಿ ತಾಗಿತು । ಗೋಪಾಲಕೃಷ್ಣಗೆ । ಎಂಥಾ ಪಾಪಿ ದೃಷ್ಟಿ ತಾಗಿತು ॥ ಪಲ್ಲ ॥ ಆಗಮಾಳಿ ಭೋಗರೂಳಿ । ಕಮಲೆಯರು ಕಮಲೆಯಾ ॥ ವಾರಿಜಾಕ್ಷ ಸದನದೊಳಗೆ । ಆಡುತಿರುವ ಪುಟ್ಟಮಗುವಿಗೆ ॥ ೧ ॥ ಬಿಂದಳಿಯಾನಿಟ್ಟಮಗುವಿಗೆ । ಮುಂದಕಡೆಯಲಿ ನೋಡಿ ಜನರೂ ॥ ಸುಂದರಾಸುಂದರಾಂಗನ । ಕಂಠಿಸರಗಳನಿಟ್ಟ ಮಗುವಿಗೆ ॥ ೨ ॥ ತೊಡೆಯ ಮೇಲೆ ಹಾಲು ಕುಡಿಯುತ । ಕಡುಗೊಂಬೆಯಂತೆ ಕಾಲು ನೀಡುತ ॥ ಕಡುಮುದ್ದು ಶ್ರೀ ಉಡುಪಿಕೃಷ್ಣಗೆ । ಕಡದ ಬೆಣ್ಣೆಯ ತಿಂದ ಮಗುವಿಗೆ ॥ ಯಾವ ॥ ೩ ॥ ಬೊಟ್ಟು ತಿಲಕವನಿಟ್ಟ ಮಗುವಿಗೆ । ಸೃಷ್ಟಿಪಾಲನ ಮಾಡಿದವನಿಗೆ ॥ ಗೋಪಾ ಗೋಪಾಲಕೃಷ್ಣಗೆ । ಹೂವಿನಂಗಿಯನಿಟ್ಟ ಮಗುವಿಗೆ ॥ ಯಾವ ॥ ೪ ॥ ಚಕ್ರವನಿಟ್ಟ ಮಗುವಿಗೆ । ನಾಲ್ಕು ಕಡೆಯಲಿ ನೋಡಿ ಜನರೂ ॥ ಸುಂದರ ುಂದರಾಂಗನ । ವಂಕಿಸರಿಗೆಯನಿಟ್ಟ ಮಗುವಿಗೆ ॥ ೫ ॥

## ವನಿತೆಯರಲ್ಲಿರಬೇಕಾದ ಗುಣಗಳು.

೧೦೭ ॥ ರಾಗ,ಧನ್ಯಾಸಿ [ಧಾಟಿ:- ಧನವು ಫಲಿಸಬೇಕೆಂಥಾದಾ] ಏಕತಾಳ.

ವನಿತೆಯಾಗಬೇಕೆಂಥವಳು। ಕಾಂ।ತನ ಮನ ತೋಷಿಸುವಂಥವಳು ॥ ನನ ಬುದ್ಧಿಯೊಳಿರುವಂಥವಳು । ಬಹು । ವಿನಯದಿಂದ ನುಡಿವಂಥವಳು ॥ ವನಿತೆ ॥ ೧ ॥ ಅತ್ತೆ ಮಾಂವ ಭಾವಂದಿರೊಳು । ನಿಜ। ಭೃತ್ಯಳಂತೆ ಸೇವಿಸುವವಳು ॥ ಅತ್ತಿಗೆ ನಾದಿನಿ ಮೈದುನರೊಳು । ತಾ । ನುತ್ತಮ ಪ್ರೀತಿಯ ತೋರ್ವವಳು ॥ ವನಿತೆ ॥ ೨ ॥ ಮನೆಗೆಲಸದೊಳಲಕ್ಷಿಸದವಳು । ತನ್ನ । ತನುಮುರಿ ಮಾಡುತ ತಿರುಗುವಳು ॥ ಮನೆಬಿಟ್ಟು ಹೊರಹೋಗ ದಂಥವಳು । ತನ್ನ । ಮನೆಗೆ ಬಂದವರಾದರಿಸುವಳು ॥ ವನಿತೆ ॥ ೩ ॥ ಭ್ರಷ್ಟ ಮಾತಿಗೆ ಕಿವಿ ಗೊಡದವಳು । ತನ್ನ ದೃಷ್ಟಿಪಾಪದೊಳಗಿಡದವಳು ॥ ಗೋಷ್ಠಾವಣದ್ದರಿ ಹರಶಾಂತನೆ ಪತಿ । ಶ್ರೇಷ್ಠ ದೈವತನಗೆಂಬುವಳು ॥ ವನಿತೆ ॥ ೪ ॥

।೧೦೮ ॥ ರಾಗ, ಸೌರಾಷ್ಟ್ರ [ಧಾಟಿ - ಅಕ್ರೂರವರದ ತ್ರಿವಿಕ್ರಮಗೇ] ಆದಿತಾಳ

ಮುಕುಟಕ್ಕೆ ಮಂಗಳಂ ಮತ್ಸ್ಯಾವತಾರಗೆ । ಮುಖಕ್ಕೆ ಮಂಗಳಂ ಮುದ್ದು ಕೂರ್ಮನಿಗೇ ॥ ಸುಕಂಠಕ್ಕೆ ಮಂಗಳಂ ಸೂಕರರೂಪಗೆ । ನಖಕ್ಕೆ ಮಂಗಳಂ ಉಗ್ರನರಸಿಂಹಗೇ ॥ ಮಂಗಳಂ ಜಯ ಮಂಗಳಂ ॥ ೧ ॥ ವಕ್ಷಕ್ಕೆ ಮಂಗಳಂ ಬಟುವಾಮನಗೆ । ಪಕ್ಷಗೆ ಮಂಗಳಂ ಭಾರ್ಗವಗೇ ॥ ಕಕ್ಷಕ್ಕೆ ಮಂಗಳಂ ಕಾಕುಸ್ಥರಾಮಗೆ । ಕುಕ್ಷಿಗೆ ಮಂಗಳಂ ಶ್ರೀ ಕೃಷ್ಣಗೇ ॥ ೨ ॥ ಊರುಗಳಿಗೆ ಮಂಗಳ ಉತ್ತಮ ಬೌದ್ಧಗೆ । ಚರಣಕ್ಕೆ ಮಂಗಳ ಕಲ್ಕಿಮೂರುತಿಗೆ ॥ ಪರಿಪರಿ ಮಂಗಳಂ ಪಾವನಚರಿತಗೆ । ಪುರಂದರ ವಿಠಲಗೆ ಜಯ ಮಂಗಳಂ ॥ ಮಂಗಳಂ ನಿತ್ಯ ಶುಭಮಂಗಳಂ ॥ ೩ ॥

